





# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*

Vol. - 13 October 2015 Issue No. 05 ₹ 10/-

## ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆಯ ಪರವಾಗಿ ಕರ್ನಾಟಕದ ಜನತೆಗೆ ಕನ್ನಡ ರಾಜ್ಯೋತ್ಸವ ಮತ್ತು ದೀಪಾವಳಿ ಹಬ್ಬದ ಹಾರ್ದಿಕ ಶುಭಾಶಯಗಳು




ದಿನಾಂಕ 20 ಸೆಪ್ಟೆಂಬರ್ 2015ರಂದು ಡಾ ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರದಲ್ಲಿ ಜರುಗಿದ 97ನೇ ರಾಜ್ಯ ಪರಿಷತ್ ಸಭೆಯನ್ನು ಉದ್ಘಾಟಿಸಿದ ರಾಜ್ಯ ಸಂಸ್ಥೆ ಉಪಾಧ್ಯಕ್ಷಿಣಿಯಾದ ಶ್ರೀಮತಿ ಸರೋಜ ವಿ. ನಾಯ್ಡು, ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ, ಪ್ರಕಟಣ ಸಮಿತಿ ಅಧ್ಯಕ್ಷರಾದ ಡಾ. ಗೊ.ರು. ಚನ್ನಬಸಪ್ಪ, ಉಪಾಧ್ಯಕ್ಷರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಆಯುಕ್ತರುಗಳಾದ ಶ್ರೀ ಎಂ.ಎ. ಖಾಲಿದ್, ಶ್ರೀಮತಿ ಗೀತಾ ನಟರಾಜ್, ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಸಿದ್ದಯ್ಯ, ರಾಜ್ಯ ಕೋಶಾಧಿಕಾರಿಗಳಾದ ಶ್ರೀ ಪ್ರಭುದೇವ ಜೆ. ಚಿಗಟೇರಿ ಅವರುಗಳು ಚಿತ್ರದಲ್ಲಿದ್ದಾರೆ.



27 ಸೆಪ್ಟೆಂಬರ್ 2015ರಂದು ಚಿತ್ರದುರ್ಗದಲ್ಲಿ ಜರುಗಿದ ರಾಜ್ಯ ಮಟ್ಟದ ...ವ ಸದಸ್ಯರ ಸಮಾವೇಶದ ಉದ್ಘಾಟನೆಯನ್ನು ಮಾನ್ಯ ಲೋಕಸಭಾ ...ಸ್ಯ ಶ್ರೀ ಬಿ.ಎನ್. ಚಂದ್ರಪ್ಪ ಅವರು ನೆರವೇರಿಸಿದರು. ಚಿತ್ರದಲ್ಲಿ ಡಾ. ಗೊ.ರು. ...ಬಸಪ್ಪ, ಅಧ್ಯಕ್ಷರು ಪ್ರಕಟಣಾ ಸಮಿತಿ, ಮದಕರಿನಾಯಕ ವಿದ್ಯಾಸಂಸ್ಥೆಯ ...ಸ್ಥ ಶ್ರೀ ಡಿ. ಬೋರಪ್ಪ, ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ, ...ಧ್ಯಕ್ಷ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಜಿಲ್ಲಾ ಮುಖ್ಯ ಆಯುಕ್ತ ...ಎಂ. ರೇವಣ ಸಿದ್ದಪ್ಪ, ಪ.ಪೂ.ಶಿಕ್ಷಣ ಇಲಾಖೆಯ ಉಪನಿರ್ದೇಶಕಿ ...ತಿ ನಾಗವೇಣಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಜಿ.ಎ. ಅಂಗಾರೆಡ್ಡಿ ಮತ್ತು ರಾಜ್ಯ ...ಾ ಜಿಲ್ಲಾ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.



ದಿನಾಂಕ 03 ಅಕ್ಟೋಬರ್ 2015ರಂದು ಬೆಂಗಳೂರಿನ ರಾಜ್ಯ ಕಾರ್ಯಾಲಯದ ಕೊಂಡಜ್ಜಿ ಬಸಪ್ಪ ಸಭಾಂಗಣದಲ್ಲಿ ಜರುಗಿದ ರಾಜ್ಯ ಮಟ್ಟದ ಆಜೀವ ಸದಸ್ಯರ ಸಮಾವೇಶದಲ್ಲಿ ಶ್ರೀ ಶ್ರೀ ಯತಿರಾಜ ಜೀಯರ್ ಸ್ವಾಮಿಗಳು, ರಾಜ್ಯ ಕಾರ್ಯದರ್ಶಿ ಶ್ರೀ ಸಿದ್ದಯ್ಯ, ಉಪಾಧ್ಯಕ್ಷ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಬೆಂಗಳೂರು ಉತ್ತರ ಜಿಲ್ಲೆಯ ಮುಖ್ಯ ಆಯುಕ್ತೆ ಶ್ರೀಮತಿ ಪಿ. ಸರೋಜ, ರಾಜ್ಯ ಜಂಟಿ ಕಾರ್ಯದರ್ಶಿ ಶ್ರೀ ಚಿನ್ನಸ್ವಾಮಿರೆಡ್ಡಿ ಮತ್ತು ಶ್ರೀಮತಿ ಎಸ್.ಕೆ. ಪ್ರಭಾ ಚಿತ್ರದಲ್ಲಿದ್ದಾರೆ.



ದಿ. 17 ಸೆಪ್ಟೆಂಬರ್ 2015ರಂದು ಕೊಪ್ಪಳದ ಜಿಲ್ಲಾ ಕ್ರೀಡಾಂಗಣದಲ್ಲಿ ಜರುಗಿದ "ಹೈದ್ರಾಬಾದ್ ಕರ್ನಾಟಕ ದಿನಾಚರಣೆ" ಕಾರ್ಯಕ್ರಮದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳಿಂದ ವಂದನೆಯನ್ನು ಸ್ವೀಕರಿಸುತ್ತಿರುವ ಮಾನ್ಯ ಸಣ್ಣನೀರಾವರಿ ಸಚಿವರೂ ಹಾಗೂ ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀ ಶಿವರಾಜ್ ತಂಗಡಗಿ ಅವರನ್ನು ಕಾಣಬಹುದು.



ದಿ. 31 ಆಗಸ್ಟ್ 2015ರಂದು ಶಿವಮೊಗ್ಗದಲ್ಲಿ ಜರುಗಿದ ದಿ॥ ಕೊಂಡಜ್ಜಿ ಬಸಪ್ಪ ಜನ್ಮ ಶತಮಾನೋತ್ಸವ ಕಾರ್ಯಕ್ರಮದ ಉದ್ಘಾಟನಾ ಸಮಾರಂಭದಲ್ಲಿ ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಮಾತನಾಡುತ್ತಿರುವುದು. ಶ್ರೀ ಡಿ.ಎಚ್. ಶಂಕರಮೂರ್ತಿ, ಮಾನ್ಯ ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್, ಶ್ರೀ ಭಾನು ಪ್ರಕಾಶ್ ಮಾನ್ಯ ವಿಧಾನ ಪರಿಷತ್ ಸದಸ್ಯರು, ಶ್ರೀ ಹೆಚ್.ಡಿ. ರಮೇಶ್ ಶಾಸ್ತ್ರಿ, ಡಿ.ಸಿ.ಸಿ., ಶ್ರೀ ಉಮೇಶ್ ಶಾಸ್ತ್ರಿ, ಡಿ.ಸಿ(ಎಸ್), ಶ್ರೀಮತಿ ಎಸ್.ಆರ್. ವಿಜಯ ಲಕ್ಷ್ಮಿ, ಡಿ.ಸಿ(ಜಿ), ಶ್ರೀ ಕೆ.ಪಿ. ಬಿಂದುಕುಮಾರ, ಜಿಲ್ಲಾ ಕಾರ್ಯದರ್ಶಿ ಹಾಗೂ ಇತರರು ಚಿತ್ರದಲ್ಲಿದ್ದಾರೆ.




ದಿ. 6 ಆಗಸ್ಟ್ 2015ರಂದು ದಾವಣಗೆರೆಯ ರೋಟರಿ ಬಾಲಭವನದಲ್ಲಿ ಜರುಗಿದ ಜಿಲ್ಲಾ ಮಟ್ಟದ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಶ್ರೀಮತಿ ಹೆಚ್.ಎಂ. ಪ್ರೇಮಾ, ಉಪನಿರ್ದೇಶಕರು ಸಾ.ಶಿ. ಇಲಾಖೆ ಇವರು ಉದ್ಘಾಟಿಸಿದರು. ಜಿಲ್ಲಾ ಸಂಸ್ಥೆ ಅಧ್ಯಕ್ಷ ಶ್ರೀ ಮಹಮದ್ ವಾಸಿಲ್, ಜಿ.ಮು.ಆ. ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿ, ಜಿಲ್ಲಾ ಆಯುಕ್ತರುಗಳಾದ ಶ್ರೀ ಎ.ಪಿ. ಷಡಾಕ್ಷರಪ್ಪ, ಶ್ರೀಮತಿ ಪುಟ್ಟಮ್ಮ ಮಹಾರುದ್ರಯ್ಯ ಹಾಗೂ ಇತರರು ಚಿತ್ರದಲ್ಲಿದ್ದಾರೆ.



ದಿನಾಂಕ 02 ಅಕ್ಟೋಬರ್ 2015 ರಂದು ಚಿತ್ರದುರ್ಗ ಜಿಲ್ಲಾ ಸಂಸ್ಥೆ ಕಛೇರಿಯಲ್ಲಿ ಜರುಗಿದ ಗಾಂಧಿಜಯಂತಿ ಕಾರ್ಯಕ್ರಮದಲ್ಲಿ ಭಾಗವಹಿಸಿದ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು, ಸ್ಕೌಟರ್ಸ್-ಗೈಡರ್ಸ್ ಹಾಗೂ ಸ್ಕೌಟ್ಸ್-ಗೈಡ್ಸ್‌ಗಳನ್ನು ಕಾಣಬಹುದು.



ದಿ. 5 ರಿಂದ 10 ಅಕ್ಟೋಬರ್ 2015ರವರೆಗೆ ಡಾ॥ ಆನಿಬೆಸೆಂಟ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರದಲ್ಲಿ ಜರುಗಿದ ಪ್ರಿ-ಎ.ಎಲ್.ಟಿ. ತರಬೇತಿ ಶಿಬಿರದಲ್ಲಿ ಭಾಗವಹಿಸಿದ ಶಿಬಿರಾರ್ಥಿಗಳು ಹಾಗೂ ಸಿಬ್ಬಂದಿ ವರ್ಗದವರು.



ದಿ. 6 ರಿಂದ 10 ಅಕ್ಟೋಬರ್ 2015ರ ವರೆಗೆ ಡಾ॥ ಆನಿಬೆಸೆಂಟ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರದಲ್ಲಿ ಜರುಗಿದ ಪುನಶ್ಚೇತನ ಶಿಬಿರದಲ್ಲಿ ಭಾಗವಹಿಸಿದ ಕರ್ನಾಟಕ ರಾಜ್ಯದ ತರಬೇತುದಾರರು ಹಾಗೂ ಸಿಬ್ಬಂದಿವರ್ಗದವರು.



ದಿ. 22 ಸೆಪ್ಟೆಂಬರ್ 2015ರಂದು ಚಿಕ್ಕಮಗಳೂರು ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಅಪರ ಜಿಲ್ಲಾಧಿಕಾರಿ ಶ್ರೀಮತಿ ಎಂ.ಎಲ್. ವೈಶಾಲಿ ಅವರ ನೇತೃತ್ವದಲ್ಲಿ ಜರುಗಿದ ಸಭೆಯಲ್ಲಿ ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ, ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎಂ.ಎನ್. ಷಡಕ್ಷರಿ ಹಾಗೂ ಇತರ ಜಿಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.



ದಿ. 27 ಆಗಸ್ಟ್ 2015ರಂದು ಧಾರವಾಡ ಜಿಲ್ಲೆಗೆ ಭೇಟಿ ನೀಡಿದ ರಾಜ್ಯ ಸಂಸ್ಥೆಯ ಉಪಾಧ್ಯಕ್ಷ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಹಾಗೂ ಇತರರನ್ನು ಧಾರವಾಡ ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಎಸ್.ಸಿ. ಕರಿಕಬ್ಬಿ ಅವರು ಸ್ವಾಗತಿಸುತ್ತಿರುವುದು. ಶ್ರೀ ಎಂ.ಎಂ. ಲೋಂಡೆ, ಜಿ.ಮು.ಆ. ಹಾಗೂ ಶ್ರೀ ವಿ.ವಿ. ಕಟ್ಟಿ ಜಿ.ಸ್ಕೌ.ಆ. ಚಿತ್ರದಲ್ಲಿದ್ದಾರೆ.




ದಿ. 28 ಆಗಸ್ಟ್ 2015ರಂದು ರಾಯಚೂರು ಜಿಲ್ಲೆ ದೇವದುರ್ಗದಲ್ಲಿ ಜರುಗಿದ ಸ್ಕೌಟರ್ಸ್-ಗೈಡರ್ಸ್ ಸಮಾವೇಶದ ಉದ್ಘಾಟನೆಯನ್ನು ನೆರವೇರಿಸಿದ ತಾಲ್ಲೂಕು ದೈಹಿಕ ಶಿಕ್ಷಣ ಪರಿವೀಕ್ಷಕ ಶ್ರೀ ನಿಂಗಪ್ಪ ಹಾಗೂ ಇತರರು ಚಿತ್ರದಲ್ಲಿದ್ದಾರೆ.



ದಿ. 31 ಆಗಸ್ಟ್ 2015ರಂದು ರಾಯಚೂರು ಜಿಲ್ಲೆ ಲಿಂಗಸೂಗೂರಿನಲ್ಲಿ ಜರುಗಿದ ಸ್ಕೌಟರ್ಸ್-ಗೈಡರ್ಸ್ ಸಮಾವೇಶದ ಉದ್ಘಾಟನೆ ನೆರವೇರಿಸಿದ ಕ್ಷೇತ್ರಸಮನ್ವಯಾಧಿಕಾರಿ ಶ್ರೀಮತಿ ಸರೋಜ್ ಪೋಳ್ ಹಾಗೂ ಇತರರು ಚಿತ್ರದಲ್ಲಿ ಇದ್ದಾರೆ.




ದಿ. 14 ಸೆಪ್ಟೆಂಬರ್ 2015ರಂದು ಸಿಂಧನೂರಿನಲ್ಲಿ ಜರುಗಿದ ಸ್ಕೌಟರ್ಸ್-ಗೈಡರ್ಸ್ ಸಮಾವೇಶದಲ್ಲಿ ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಮಾತನಾಡುತ್ತಿರುವುದು. ಸ್ಥಳೀಯ ಮತ್ತು ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.




ದಿ॥ ಕೊಂಡಜ್ಜಿ ಬಸಪ್ಪನವರ ಜನ್ಮಶತಮಾನೋತ್ಸವ ಪ್ರಯುಕ್ತ ರಾಯಚೂರು ಜಿಲ್ಲೆ ಆತ್ಕೂರ, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಆವರಣದಲ್ಲಿ ಕಬ್ಸ್‌ಗಳು ಸಸಿಗಳನ್ನು ನೆಡುವ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.



Happy Pachmarhi Day, 10th September 1956
The Bharat Scouts & Guides, National Training Centre & National Adventure Institute, Pachmarhi, M.P



ದಿ. 24 ರಿಂದ 27 ಆಗಸ್ಟ್ 2015ರ ವರೆಗೆ ಬಾಗಲಕೋಟೆಯಲ್ಲಿ ಜರುಗಿದ ಜಿಲ್ಲಾ ಮಟ್ಟದ ರೋವರ್ಸ್–ರೇಂಜರ್ಸ್ ಪರೀಕ್ಷಾ ಶಿಬಿರದ ಉದ್ಘಾಟನೆಯುನ್ನು ಶ್ರೀ ಶ್ರೀ ಶ್ರೀ ಪರಮರಾಮೋರೋಡ ಮಹಾಸ್ವಾಮಿಗಳು ಉದ್ಘಾಟಿಸಿದರು. ಕಾಲೇಜಿನ ಪ್ರಾಂಶುಪಾಲರು, ಉಪನ್ಯಾಸಕರು ಹಾಗೂ ಜಿಲ್ಲಾ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.



Participants of 16th Unit Leaders Conference conducted by Bengaluru South District at Baba Hardyal Singh Natural Retreat Center in Shillgaon, Shimla from 12 to 13 Oct 2015.




ದಿ. 18.08.2015ರಂದು ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ ರವರು ರಾಜ್ಯ ಮಟ್ಟದ ಜೋಟಾ–ಜೋಟಿ ಕಾರ್ಯಕ್ರಮದಲ್ಲಿ ಭಾಗವಹಿಸಿದರು. ಶ್ರೀ ಕಿರಣ್ ಕುಮಾರ್, ಗೌರವ ಕಾರ್ಯದರ್ಶಿ, ಅವೇಚೂರ್ ರೇಡಿಯೋ ಕ್ಲಬ್, ಶ್ರೀ ಟಿ.ಎ. ಮಂಜುನಾಥಚಾರ್, ಎಸ್.ಓ.ಸಿ(ಎಸ್) ಚಿತ್ರದಲ್ಲಿದ್ದಾರೆ.



ದಿ. 18 ರಿಂದ 23 ಸೆಪ್ಟೆಂಬರ್ 2015ರವರೆಗೆ ರಾಯಚೂರಿನಲ್ಲಿ ಜರುಗಿದ ರಾಜ್ಯ ಮಟ್ಟದ ರೋವರ್ಸ್–ರೇಂಜರ್ಸ್ ಸಮುದಾಯ ಸೇವಾ ಶಿಬಿರದಲ್ಲಿ ಸ್ವಚ್ಛತಾ ಕಾರ್ಯಕ್ರಮದಲ್ಲಿ ತೊಡಿಗಿರುವ ರೋವರ್ಸ್–ರೇಂಜರ್ಸ್.



ಶಿರಸಿ ಶೈಕ್ಷಣಿಕ ಜಿಲ್ಲೆ ಬನವಾಸಿಯಲ್ಲಿ ಜರುಗಿದ ಗಾಂಧಿ ಜಯಂತಿ ಅಂಗವಾಗಿ ಅಕ್ಟೋಬರ್ 02 ರಂದು ಸ್ವಚ್ಛತಾ ಕಾರ್ಯದಲ್ಲಿ ತೊಡಗಿರುವ ಸ್ಕೌಟ್ಸ್ ಹಾಗೂ ರೋವರ್ಸ್‌ಗಳು.

# ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*

Monthly Published by

**The Bharat Scouts & Guides, Karnataka**

State Headquarters, Shanthigruha

# 39, Palace Road, Bengaluru-560 001

Tel : 080-2226 0017, 2226 7470




**ಪರಿವಿಡಿ**




**ಸಂಚಿಕೆಯ ವಾರ್ಷಿಕ ಚಂದಾ ರೂ. 100/-**

**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ ವಾರ್ಷಿಕ ಚಂದಾ ರೂ. 100/- ಚಂದಾಹಣವನ್ನು**
**ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ**
**ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ # 39, ಅರಮನೆ ರಸ್ತೆ, ಬೆಂಗಳೂರು-560 001**
**ದೂ: 080-2226 0017, 2226 7470 ಇಲ್ಲಿಗೆ ಕಳುಹಿಸಲು ಕೋರಿದೆ.**

**ನಮ್ಮ ಸಂಸ್ಥೆಯ ವೆಬ್‌ಸೈಟ್ ಹಾಗು ಫೇಸ್‌ಬುಕ್ ಚಾಲನೆಯಲ್ಲಿದೆ : ಸಂಪರ್ಕಿಸಿ**

**www.bsgkarnataka.org | www.kondajjibasappa.org**

**Face book ground Link: BSGKJamborette2015**

# ರಾಜ್ಯ ಮುಖ್ಯ ಆಯುಕ್ತರ ನುಡಿ

"ಕರ್ನಾಟಕದ ಜನತೆಗೆ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಪರವಾಗಿ ಕರ್ನಾಟಕ ರಾಜ್ಯೋತ್ಸವದ ಹಾಗು ದೀಪಾವಳಿ ಹಬ್ಬದ ಹಾರ್ದಿಕ ಶುಭಾಶಯಗಳು."



ಸಾಮಾನ್ಯವಾಗಿ ಅಕ್ಟೋಬರ್ ನಮ್ಮೆಲ್ಲರಿಗೂ ಮಹತ್ವದ ತಿಂಗಳು. ಈ ತಿಂಗಳಲ್ಲಿ ಇಡೀ ಜಗತ್ತಿಗೇ ಆದರ್ಶದ ಮಾರ್ಗ ತೋರಿದ ಮಹಾತ್ಮಗಾಂಧೀಜಿಯವರ ಜಯಂತಿಯನ್ನು ಆಚರಿಸಲಾಗುತ್ತದೆ. ಹಾಗೆಯೇ ನಾಡಹಬ್ಬ ದಸರಾ ಜನರ ಹಬ್ಬವಾಗಿ ಆಚರಿಸಲ್ಪಡುತ್ತದೆ. ಇದೇ ತಿಂಗಳಲ್ಲಿ ಆಯಾ ರಾಜ್ಯಗಳಲ್ಲಿ ವಿವಿಧ ರೀತಿಯಲ್ಲಿ ಕಾಳಿಕಾದೇವಿ, ಚಾಮುಂಡೇಶ್ವರಿ ಒಟ್ಟಾರೆ ನವರಾತ್ರಿಯಾಗಿ ದೇವಿಯನ್ನು ಆರಾಧಿಸುತ್ತಾರೆ.

ಕಳೆದ ತಿಂಗಳ 20 ರಂದು ದೊಡ್ಡಬಳ್ಳಾಪುರದ ಡಾ॥ ಆನಿಬೆಸೆಂಟ್ ತರಬೇತಿ ಕೇಂದ್ರದಲ್ಲಿ 97ನೇ ರಾಜ್ಯ ಪರಿಷತ್ ಸಭೆ ಅರ್ಥಪೂರ್ಣವಾಗಿ ನಡೆಯಿತು. ಚಿತ್ರದುರ್ಗ ಹಾಗೂ ಬೆಂಗಳೂರಿನ ಶಾಂತಿಗೃಹ ಕೇಂದ್ರ ಕಛೇರಿಯಲ್ಲಿ ಆಜೀವ ಸದಸ್ಯರ ಸಭೆ ನಡೆಯಿತು. ಈ ಸಭೆಯಲ್ಲಿ ಹಲವು ಹಿರಿಯ ಸದಸ್ಯರು ಉತ್ತಮ ಸಲಹೆ ನೀಡಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿ ವ್ಯಾಪಕವಾಗಿ ಬೆಳೆಯಲು ಬೇಕಾದ ವಿಷಯಗಳ ಬಗ್ಗೆ ಮುಕ್ತಮನಸ್ಸಿನಿಂದ ಚರ್ಚೆ ಮಾಡಿದರು. ಆಧುನಿಕ ಸಂಪರ್ಕ ಮಾಧ್ಯಮಗಳಾದ ಇ-ಮೇಲ್ ಮತ್ತು ಇಂಟರ್ನೆಟ್ (ಅಂತರ್ಜಾಲ) ಬಳಸಿಕೊಂಡು ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಪರಸ್ಪರ ಸಂದೇಶಗಳನ್ನು ಹಂಚಿಕೊಳ್ಳಬೇಕು. ತರಬೇತಿ ಶಿಕ್ಷಕರುಗಳು ಮತ್ತು ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳ ನಡುವೆ ನಿಕಟ ಸಂಪರ್ಕವಿರಬೇಕು. ಬೆಂಗಳೂರಿನಲ್ಲಿರುವ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಕೇಂದ್ರ ಕಛೇರಿ, ಜಿಲ್ಲಾ ಕೇಂದ್ರಗಳ ಕಛೇರಿಯೊಂದಿಗೆ ಸಂವಹನವಿರಬೇಕು, ಎಂಬ ಹಲವಾರು ಸಮಯೋಚಿತವಾದ ಸಲಹೆಗಳನ್ನು ನೀಡಿದ್ದಾರೆ. ಬೆಂಗಳೂರು ಕೇಂದ್ರ ಕಛೇರಿಯಿಂದ ಪ್ರತಿತಿಂಗಳು ಪ್ರಕಟವಾಗುವ "ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್" ವಾರ್ತಾಪತ್ರಿಕೆ ತಮಗೆ ಬರುತಿಲ್ಲವೆಂದು ಹಲವು ಆಜೀವ ಸದಸ್ಯರು ಸಭೆಯ ಗಮನಕ್ಕೆ ತಂದರು. ಈ ಪತ್ರಿಕೆಯ ಮೂಲಕವೇ ರಾಜ್ಯ ಮುಖ್ಯ ಆಯುಕ್ತರು ಮತ್ತು ರಾಜ್ಯ ಕಾರ್ಯದರ್ಶಿಗಳು ಆಜೀವ ಸದಸ್ಯರಿಗೆ, ಸ್ಕೌಟ್ಸ್ ಮತ್ತು ಗೈಡ್ಸ್, ಸ್ಕೌಟರ್ಸ್-ಗೈಡರ್ಸ್, ರೋವರ್ಸ್-ರೇಂಜರ್ಸ್ ಹಾಗು ಜಿಲ್ಲಾ ಆಯುಕ್ತರುಗಳು ಮತ್ತು ಸಂಬಂಧಪಟ್ಟ ಇಲಾಖೆಗಳ ಅಧಿಕಾರಿಗಳಗೆ ಹಾಗೂ ತರಬೇತಿ ಶಿಕ್ಷಕರಿಗೆ ಸಲಹೆ ಸೂಚನೆಗಳನ್ನು ನೀಡಬಹುದು ಎಂದು ಸೂಚಿಸಿದರು. ಪಶ್ಚಿಮ ಬಂಗಾಳದಲ್ಲಿ ಸಮುದಾಯ ಆಧಾರಿತ ಸ್ಕೌಟ್ಸ್ ಮತ್ತು ಗೈಡ್ಸ್ ತಂಡಗಳು **(unit)**ಗಳು ಹೆಚ್ಚಾಗಿವೆ. ನಮ್ಮ ರಾಜ್ಯದಲ್ಲಿಯೂ ನಗರಪಟ್ಟಣಗಳ ಬಡಾವಣೆಗಳಲ್ಲಿ ನಮ್ಮ ಮಕ್ಕಳು ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಮುಕ್ತದಳಗಳನ್ನು ಪ್ರೋತ್ಸಾಹಿಸಬೇಕು, ಒಟ್ಟಾರೆ ನಮ್ಮ ಸಮವಸ್ತ್ರಧರಿಸಿದ ಸ್ಕೌಟ್ಸ್ ಮತ್ತು ಗೈಡ್ಸ್ ಯುವಕ-ಯುವತಿಯರನ್ನು ಜನತೆ ನೋಡುವಂತಾಗಬೇಕು ಎಂಬ ಧನಾತ್ಮಕ ಆಶಯಗಳನ್ನು ಆಜೀವ ಸದಸ್ಯರು ವ್ಯಕ್ತಪಡಿಸಿದರು. ಇದೆಲ್ಲವೂ ಒಂದು ರೀತಿಯಲ್ಲಿ ನಮ್ಮ ಚಳವಳಿ ಭವಿಷ್ಯದ ದಿನಗಳಲ್ಲಿ ವಿಸ್ತರಣೆಯಾಗುವ ಆಕಾಂಕ್ಷೆಯಾಗಿದೆ. ಕೇಂದ್ರ ಕಛೇರಿಯಲ್ಲಿ ಹಾಗು ವಿವಿಧ ಜಿಲ್ಲೆಗಳಲ್ಲಿ ಜರುಗುವ ಕಾರ್ಯಕ್ರಮಗಳ ವಿವರಗಳು ತಿಳಿಯಬೇಕು ಎಂದು ಕೆಲ ಸದಸ್ಯರು ಸೂಚಿಸಿದ್ದಾರೆ. ಇದೆಲ್ಲದಕ್ಕೂ ನಾನು ಮತ್ತು ನಮ್ಮ ಪದಾಧಿಕಾರಿಗಳು ಸಕಾರತ್ಮಕವಾಗಿಯೇ ಸ್ಪಂದಿಸಿದ್ದೇವೆ. ಈ ಹಿನ್ನೆಲೆಯಲ್ಲಿ ಆಜೀವ ಸದಸ್ಯರ ಚಿತ್ರದುರ್ಗ ಮತ್ತು ಬೆಂಗಳೂರಿನ ಸಭೆಗಳು ಯಶಸ್ವಿಯಾಗಿದೆ.

ನಾನು ಕಳೆದ ತಿಂಗಳು ಹಾವೇರಿ, ಶಿರಸಿ ಮತ್ತು ಹೊನ್ನಾವರಗಳಿಗೆ ಭೇಟಿನೀಡಿ ಸ್ಥಳೀಯ ಸ್ಕೌಟ್ಸ್ ಮತ್ತು ಗೈಡ್ಸ್ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದೆ. ಶಿವಮೊಗ್ಗದಲ್ಲಿ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್‌ನವರು ಮಾಜಿ ರಾಜ್ಯ ಮುಖ್ಯ ಆಯುಕ್ತರಾದ ದಿವಂಗತ ಜಸ್ಟೀಸ್ ಶ್ರೀ.ಕೆ.ಶಂಕರನಾರಾಯಣ್‌ರಾವ್ ಅವರನ್ನು ಸ್ಮರಿಸುವ ಕಾರ್ಯಕ್ರಮ ಸಂಘಟಿಸಿದ್ದರು. ಮುಕ್ತದಳಗಳ ಹತ್ತರಿಂದ ಹದಿನಾರು ವರ್ಷ ವಯಸ್ಸಿನ ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳ ರ‍್ಯಾಲಿ ಅಲ್ಲಿನ ಜನರನ್ನು ಆಕರ್ಷಿಸಿತ್ತು. ಜಿಲ್ಲಾ ಮಟ್ಟದಲ್ಲಿ ಇಂಥಹ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಸಂಘಟಿಸಿದ ಶಿವಮೊಗ್ಗ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಪದಾಧಿಕಾರಿಗಳನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಭವಿಷ್ಯದ ತಿಂಗಳುಗಳಲ್ಲಿ ದಿ॥ ಕೊಂಡಜ್ಜಿ ಬಸಪ್ಪ ಅವರ ಜನ್ಮಶತಮಾನೋತ್ಸವ ಆಚರಣೆಯ ಸಂಭ್ರಮದ ಕಾರ್ಯಕ್ರಮವನ್ನು ಯಶಸ್ವಿಗೊಳಿಸುವ ಹೊಣೆಗಾರಿಕೆ ನಮ್ಮೆಲ್ಲರ ಮುಂದಿದೆ. ಈವರೆಗೆ ಕರ್ನಾಟಕದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ರಾಜ್ಯ ಮುಖ್ಯ ಆಯುಕ್ತರಾಗಿ ಸೇವೆ ಸಲ್ಲಿಸಿರುವ ಎಲ್ಲಾ ಹಿರಿಯರು ಚಳವಳಿಗೆ ನೀಡಿರುವ ಕೊಡುಗೆ ಅಪಾರವಾಗಿದೆ. ಆದರೆ, ಎಲ್ಲರಿಗಿಂತ ಭಿನ್ನವಾಗಿ ಆಲೋಚಿಸಿ ಈ ಚಳವಳಿಯನ್ನು ರಾಜ್ಯದಾದ್ಯಂತ ವಿಸ್ತರಿಸಿ, ಈ ಸಂಸ್ಥೆಗೆ ದೂರದೃಷ್ಟಿಯಿಂದ ದೊಡ್ಡಬಳ್ಳಾಪುರದ ಡಾ॥ ಆನಿಬೆಸೆಂಟ್ ತರಬೇತಿ ಶಿಬಿರ ಕೇಂದ್ರವನ್ನು ಸರ್ಕಾರದ ಸಹಾಯದಿಂದ ಅಭಿವೃದ್ಧಿ ಪಡಿಸಿರುವ ದಿ॥ ಕೊಂಡಜ್ಜಿ ಬಸಪ್ಪ ಅವರ ಕೊಡುಗೆ ಮಹತ್ವವಾದದ್ದು ಎಂದು ತಿಳಿದಿದ್ದೇನೆ. ಇದೇ ರೀತಿ ದಿವಂಗತ ಶ್ರೀ ಕೊಂಡಜ್ಜಿ ಬಸಪ್ಪ ಅವರ ಜನ್ಮಸ್ಥಳವಾಗಿರುವ ಹರಿಹರ ತಾಲ್ಲೂಕಿನ ಕೊಂಡಜ್ಜಿ ಗ್ರಾಮದಲ್ಲಿ ಪ್ರಾಕೃತಿಕವಾಗಿ ನಯನಮನೋಹರವಾಗಿರುವ ಸ್ಥಳದಲ್ಲಿ ವಿಶಾಲ ವಿಸ್ತೀರ್ಣದ ಪ್ರದೇಶದಲ್ಲಿ ಸ್ಕೌಟ್ಸ್-ಗೈಡ್ಸ್ ತರಬೇತಿ ಶಿಬಿರ ಕೇಂದ್ರ ಅಸ್ಥಿತ್ವಕ್ಕೆ ಬರಲು ಅವರೇ ಕಾರಣರಾಗಿದ್ದಾರೆ. ಈ ಹಿನ್ನೆಲೆಯಲ್ಲಿ ದಿ॥ ಕೊಂಡಜ್ಜಿ ಬಸಪ್ಪ ಅವರು ಕರ್ನಾಟಕ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಬೆಳವಣಿಗೆಗೆ ನೀಡಿರುವ ಕೊಡುಗೆ ಅನನ್ಯವಾದದ್ದು ಎಂಬುದು ಎಲ್ಲರಿಗೂ ತಿಳಿದಿರುವ ಸಂಗತಿ. ಸ್ಕೌಟ್ಸ್ ಮತ್ತು ಗೈಡ್ಸ್‌ದಳಗಳಿರುವ ಎಲ್ಲಾ ಜಿಲ್ಲೆಗಳಲ್ಲಿ ನಮ್ಮ ಜಿಲ್ಲಾ ಕಛೇರಿಗಳು ಸ್ವಂತ ನಿವೇಶನ-ಕಟ್ಟಡ ಹೊಂದಿದೆಯಾದರೂ, ದೊಡ್ಡಬಳ್ಳಾಪುರದ ಡಾ॥ ಆನಿಬೆಸೆಂಟ್ ತರಬೇತಿ ಕೇಂದ್ರ ಮತ್ತು ಕೊಂಡಜ್ಜಿ ತರಬೇತಿ ಶಿಬಿರ ಕೇಂದ್ರಗಳು ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಸಮಾಜಕ್ಕೆ ನೀಡಿರುವ ಬಹುದೊಡ್ಡ ಆಸ್ತಿ ಎಂದರೆ ತಪ್ಪಾಗಲಾರದು.

ಬೆಂಗಳೂರಿನ ಶಾಂತಿಗೃಹ ಕೇಂದ್ರ ಕಛೇರಿಯಲ್ಲಿ ಈ ತಿಂಗಳ ದಿನಾಂಕ 17 ಮತ್ತು 18 ರಂದು ಏರ್ಪಡಿಸಿದ್ದ ಜೋಟಾ-ಜೋಟಿ **(Jamboree on the Air, Jamboree on the internet )** ಕಾರ್ಯಕ್ರಮ ಅಂತರಾಷ್ಟ್ರೀಯ ಮಟ್ಟದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯಲ್ಲಿ ಸಕ್ರಿಯವಾಗಿರುವ ಯುವ ಮನಸ್ಸುಗಳನ್ನು ಬೆಸೆಯುವಲ್ಲಿ ವಿನೂತನ ಕಾರ್ಯಕ್ರಮ ಎನ್ನಬಹುದು. ಬೆಂಗಳೂರು ಉತ್ತರ ಮತ್ತು ದಕ್ಷಿಣ ಜಿಲ್ಲೆಗಳಿಂದ 300 ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್‌ಗಳು ಜೋಟ-ಜೋಟಿ ಕಾರ್ಯಕ್ರಮದಲ್ಲಿ ಭಾಗವಹಿಸಿರುತ್ತಾರೆ.

ಈಗಾಗಲೇ ನಾವುಗಳು ಈ ವರ್ಷದ 7 ತಿಂಗಳು ಮುಗಿಸಿ ನವೆಂಬರ್‌ಗೆ ಕಾಲಿಟ್ಟಿದ್ದೇವೆ. ನನ್ನ ಗಮನಕ್ಕೆ ಬಂದಿರುವಂತೆ, ರಾಜ್ಯದ ಬಹಳಷ್ಟು ಜಿಲ್ಲಾ ಸಂಸ್ಥೆಗಳು ನವೆಂಬರ್/ಡಿಸೆಂಬರ್‌ನಲ್ಲಿ ಮೂಲತರಬೇತಿ ಶಿಬಿರಗಳನ್ನು ಏರ್ಪಡಿಸಲು ಸೂಕ್ತ ಏರ್ಪಾಡುಗಳನ್ನು ಮಾಡಿರುವುದಾಗಿ ರಾಜ್ಯ ಸಂಸ್ಥೆ ಏರ್ಪಡಿಸಿದ ಸಭೆ-ಸಮಾವೇಶಗಳಲ್ಲಿ ತಿಳಿಸಿರುತ್ತಾರೆ. ನಮಗೆಲ್ಲಾ ತಿಳಿದಿರುವಂತೆ ಎಲ್ಲಾ ಜಿಲ್ಲೆಗಳಲ್ಲಿ ಪ್ರತಿ ವರ್ಷ ಒಂದು/ಎರಡು ಮೂಲತರಬೇತಿ ಕಾರ್ಯಕ್ರಮ ಆಯೋಜಿಸಲೇಬೇಕು. ಇಲ್ಲದದ್ದಲ್ಲಿ ನಾವುಗಳು ನಮ್ಮ ಜಿಲ್ಲೆಗಳಲ್ಲಿ ಹಾಕಿಕೊಂಡಿರುವ ಸಂಖ್ಯೆಯ ಬಲವನ್ನು ಮುಟ್ಟುವುದು ಕಷ್ಟಕರವಾಗುತ್ತದೆ. ಆದ್ದರಿಂದ ಎಲ್ಲಾ ಜಿಲ್ಲಾ ಸಂಸ್ಥೆಗಳ ಪದಾಧಿಕಾರಿಗಳು ಈ ಬಗ್ಗೆ ತಕ್ಷಣ ಕಾರ್ಯಪ್ರವೃತ್ತರಾಗಿ ನಿಮ್ಮ ಜಿಲ್ಲೆಗಳಲ್ಲಿ ಮೂಲತರಬೇತಿ ಶಿಬಿರಗಳನ್ನು ಏರ್ಪಡಿಸಿ ನಿಮ್ಮ ಜಿಲ್ಲೆಗಳಿಗೆ ನೀಡಿರುವ ದಳಗಳ ಗುರಿಯನ್ನು ಮುಟ್ಟಬೇಕೆಂದು ಸೂಚಿಸುತ್ತೇನೆ.

ತಮ್ಮ ವಿಶ್ವಾಸಿ

ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ,

ಪಿ.ಜಿ.ಆರ್. ಸಿಂಧ್ಯ
ರಾಜ್ಯ ಮುಖ್ಯ ಆಯುಕ್ತರು

# ರಾಜ್ಯ ಕಾರ್ಯದರ್ಶಿಗಳ ನುಡಿ

ನಿನ್ನೆ ನಮ್ಮ ಜೊತೆಗಿದ್ದವರು ನಾಳೆ ಬದುಕಿರುತ್ತಾರೋ ಅಥವಾ ನೆನಪಿನ ಒಂದು ಭಾಗವಾಗಿ ಬಿಡುತ್ತಾರೋ...; ಇದು ನಮಗೆ ತಿಳಿಯದ ಸಂಗತಿ. ಈ ಜಗತ್ತಿನಲ್ಲಿ ಯಾರೋಬ್ಬರು ಪ್ರತ್ಯೇಕವಾದ ವ್ಯಕ್ತಿಯಲ್ಲ ....; ಇಲ್ಲಿ ಪ್ರತಿಯೊಬ್ಬರು ಪರಸ್ಪರ ಸಂಬಂಧ ಹೊಂದಿರುತ್ತಾರೆ. ಈಗಾಗಲೇ ತೀರಿಕೊಂಡಿರುವ, ನಮ್ಮ ಸ್ನೇಹಿತರು, ಮತ್ತು ಹಿರಿಯರೊಂದಿಗೆ ಹಾಗೂ ಸಂಬಂಧಿಕರೊಂದಿಗೆ ನಮ್ಮ ನೆನಪುಗಳು ತಳಕು ಹಾಕಿಕೊಂಡಿರುತ್ತದೆ . ಪ್ರತಿಯೊಬ್ಬರು ಈ ಜಗತ್ತಿನಲ್ಲಿ ಒಳ್ಳೆಯದನ್ನೇ ಮಾಡಲು ಹಂಬಲಿಸುತ್ತಾರೆ. ಮನುಷ್ಯನ ಆಲೋಚನಾ ಕ್ರಮಗಳು ಮತ್ತು ಆತ ಜೀವಿಸುವ ಪರಿಸರ ಅವನ ವ್ಯಕ್ತಿತ್ವಗಳನ್ನು ರೂಪಿಸುತ್ತದೆ. ಈ ಜನ್ಮದಲ್ಲಿ ಮಾಡಿದ ನೆರವು, ಪುಣ್ಯಗಳಿಂದ ಮುಂದಿನ ಜನ್ಮದಲ್ಲಿ ಒಳ್ಳೆಯ ಪುನರ್‌ಜನ್ಮ ದೊರೆಯುತ್ತದೆ ಎಂದು ನಂಬುತ್ತೇವೆ.

ನಮ್ಮ ಪರಸ್ಪರ ಸಂಬಂಧಗಳು ಬಗ್ಗೆ ಬರೆಯುತ್ತಿರುವುದು ಏಕೆಂದರೆ....; ಈ ಅಕ್ಟೋಬರ್ ತಿಂಗಳು ಮಹಾಲಯಅಮಾವಸ್ಯೆಯ ಮಾಸ. ನಮ್ಮ ಕುಟುಂಬಗಳಲ್ಲಿ ತೀರಿಕೊಂಡಿರುವ ತಾತ,ಮುತ್ತಾತ,ಅಜ್ಜಿಯರನ್ನು ಸ್ಮರಿಸಿಕೊಂಡು, ರಕ್ತ ಸಂಬಂದಿಕರೆಲ್ಲ ಒಂದು ಕಡೆ ಸೇರಿಕೊಂಡು ಹಬ್ಬದ ಆಚರಣೆ ಮಾಡುತ್ತೇವೆ. ನಮ್ಮ ಹಿರಿಯರು ಇಷ್ಟಪಡುತ್ತಿದ್ದ ಆಹಾರ, ಅವರ ಹವ್ಯಾಸಗಳನ್ನು ನೆನಪಿಸಿಕೊಂಡು ದೀಪಹಚ್ಚಿ ಪೂಜಿಸುತ್ತೇವೆ. ಈ ಆಚರಣೆ ಬಹುತೇಕ ಎಲ್ಲಾ ಧರ್ಮಗಳಲ್ಲಿಯೂ ಇದ್ದು...; ಅವರವರ ಜಾತಿವರ್ಗಗಳ ಆಚರಣೆಯ ವಿಧಾನ ಮಾತ್ರ ವೈವಿಧ್ಯಮಯವಾಗಿರುತ್ತದೆ. ಇದನ್ನೇ ನಮ್ಮ ಹಿಂದು ಧರ್ಮದಲ್ಲಿ ಪಿತೃದೇವೋಭವ, ಮಾತೃದೇವೋಭವ, ಮತ್ತು ಗುರುದೇವೋಭವ ಎಂದು ಶ್ರದ್ಧಾಭಕ್ತಿಯಿಂದ ಸ್ಮರಿಸುತ್ತೇವೆ.

ಈ ಜಗತ್ತು ದಯಾಮಯವಾದದ್ದೇನೂ ಅಲ್ಲ. ಈ ಜಗತ್ತಿನಲ್ಲಿ ಎಲ್ಲರ ಬದುಕು ಕತ್ತಿಯ ಅಲಗಿನ ಮೇಲಿನ ನಡಿಗೆಯಾಗಿರುತ್ತದೆ. ನಮ್ಮ ಜೀವನವನ್ನು ಹಿರಿಯರು ನೀರಿನ ಮೇಲಿನ ಗುಳ್ಳೆಗೆ ಹೋಲಿಸಿದ್ದಾರೆ, ನಾವು ಸತ್ತಾಗ ನಮ್ಮ ಬೆನ್ನ ಹಿಂದೆ ಶ್ವಾಶತವಾಗಿ ಏನೇನೂ ಬರುವುದಿಲ್ಲ ಎಂದು ಶೂನ್ಯವನ್ನು ಪ್ರತಿಪಾದಿಸಿದ್ದಾರೆ. ಆದ್ದರಿಂದಲೇ ಏನೋ ದಾಸರು ಮನುಷ್ಯ ಮತ್ತು ಆತನ ಸಾಂಸರಿಕ ಪ್ರಪಂಚವನ್ನು "ನೊಂದೇನಯ್ಯ ಈ ಭವ ಬಂಧನದೊಳು ಸಿಲುಕಿ" ಎಂದು ನೋವಿನಿಂದ ಬಣ್ಣಿಸಿದ್ದಾರೆ, ಪ್ರತಿಯೊಂದರಲ್ಲಿಯೂ ಲಾಭ, ನಷ್ಠ ಹುಡುಕುವ ಮನುಷ್ಯ ತನ್ನ ಸಜ್ಜನಿಕೆಯಿಂದ, ಭಕ್ತಿಯಿಂದ, ಮಾನವೀಯತೆಯಿಂದ, ತಾನು ಮಾಡುವ ಸೇವೆಗೆ ಪ್ರತಿಫಲ ಬಯಸುತ್ತಾನೆ, ಪ್ರತಿಫಲಕ್ಕೆ ಬದಲು ದುರಂತ ದೂರೆತಾಗ ತಬ್ಬಿಬ್ಬಾಗುತ್ತಾನೆ. ನಿರ್ದಯವಾದ ಈ ಜಗತ್ತಿನ ಬಗ್ಗೆ ಕ್ಷುದ್ರಗೊಳ್ಳುತ್ತಾನೆ. ತನ್ನ ಒಳ್ಳೆಯತನಕ್ಕೆ ದುರಂತ ಎದುರುಗೊಂಡಾಗ..; ದೇವರು ಧರ್ಮಗಳ ಮೊರೆ ಹೋಗುತ್ತಾನೆ. ಒಮ್ಮೊಮ್ಮೆ ಇದೆಲ್ಲಾ ಭ್ರಮೆ ಎನಿಸುತ್ತದೆ.

ಹೀಗೆಯೇ ನಮಗೆ ನಾವೇ ಪ್ರಶ್ನಿಸಿಕೊಳ್ಳೋಣ.....? ನಾವುಗಳು ಅಂದರೆ ಮನುಷ್ಯರು ಏಕೆ ಒಳ್ಳೆಯವರಾಗ ಬೇಕು...? ಏಕೆ ಮಾನವೀಯವಾಗಿ ಕ್ರಿಯಾಶೀಲರಾಗಿ ಬದುಕಬೇಕು....? ಇದಕ್ಕೆ ನಾನು ಕಂಡುಕೊಂಡ ಉತ್ತರವೆಂದರೆ..; ಆರೋಗ್ಯವಂತ ನೆಮ್ಮದಿಯ ಬದುಕಿಗೆ, ನಮಗೆ ದೊರೆಯುವುದು ಆರೋಗ್ಯವಂತ ಬದುಕು ಮಾತ್ರ ಲಭ್ಯವಾಗುತ್ತದೆ. ಸುಖದ ಸಂಪತ್ತಿನ ಮಿತಿ ಅರಿತು ಬದುಕಿದಾಗ ಮಾತ್ರ ನೆಮ್ಮದಿ ಸಿಗುತ್ತದೆ. ಒಣ ಭ್ರಮೆಗಳನ್ನು ಇಟ್ಟುಕೊಳ್ಳದೆ, ಒಳ್ಳೆಯ ತನದಿಂದ ನಮ್ಮ ಸಂಬಂಧಗಳೊಂದಿಗೆ ಜೀವಿಸುವುದರಲ್ಲಿ ಸಾರ್ಥಕತೆ ಇರುತ್ತದೆ.

ನಮ್ಮ ಬಂಧುಗಳೊಂದಿಗೆ ತೀರಿಕೊಂಡ ಹಿರಿಯರನ್ನು ಸ್ಮರಿಸುವ ತಿಥಿ, ಶ್ರಾದ್ಧ, ಪಕ್ಷ, ಇದೆಲ್ಲದಕ್ಕೂ ಒಂದು ಮೌಲ್ಯವಿದೆ. ನಮ್ಮ ಹಿರಿಯರ ನಡೆ, ನುಡಿ ಮಾನವೀಯ ಮೌಲ್ಯಗಳನ್ನು ನಮ್ಮ ಜೀವನದಲ್ಲಿ ಅಳವಡಿಸಿಕೊಂಡು ಸಮಾಜದಲ್ಲಿ ಪರಸ್ಪರ ನೆರವಾಗುವುದನ್ನು ರೂಢಿಸಿಕೊಳ್ಳಬೇಕು. ಆದರೆ, ದುರದೃಷ್ಟಕರ ಸಂಗತಿಯೆಂದರೆ, ಈವತ್ತಿನ ಜನರು ಸ್ವಾರ್ಥ ಧೋರಣೆಗಳನ್ನು ಅಳವಡಿಸಿಕೊಳ್ಳುತ್ತಿದ್ದಾರೆ. ಸುಲಭ ಮಾರ್ಗದಲ್ಲಿ ಸಂಪತ್ತುಗಳಿಸಿಕೊಳ್ಳುವ ಸ್ವಾರ್ಥಿಗಳೇ ಹೆಚ್ಚುತ್ತಿದ್ದಾರೆ. ಶಿಕ್ಷಣ ವ್ಯವಸ್ಥೆ ಮೌಲ್ಯ ಕಳೆದು ಕೊಳ್ಳುತ್ತಿದೆ. ನನಗೆ ತಿಳಿದಿರುವ ಹಾಗೆ ಇಪ್ಪತ್ತು–ಮುವತ್ತು ವರ್ಷಗಳ ಹಿಂದೆ

ಶೈಕ್ಷಣಿಕ ವ್ಯವಸ್ಥೆ ಅರ್ಥಪೂರ್ಣವಾಗಿತ್ತು, ಗಾಂಧೀಜಿ ತಮ್ಮ ದೈನಂದಿನ ಪ್ರಾರ್ಥನಾ ಸಮಯದಲ್ಲಿ "ಅಗತ್ಯಕಿಂತಲೂ ಹೆಚ್ಚು ಸಂಪತ್ತು ಸಂಗ್ರಹ ಒಂದು ರೀತಿಯ ಅಪರಾಧ" ಎಂದು ಹೇಳುತ್ತಿದ್ದರು. ಖ್ಯಾತ ಭೌತಶಾಸ್ತ್ರ ವಿಜ್ಞಾನಿ "ನಾನು ವಾಸಿಸುತ್ತಿರುವ ಮನೆ..... ಮಾಡುತ್ತಿರುವ ಊಟ ಎಲ್ಲವೂ ಈ ಸಮಾಜ ನನಗೆ ನೀಡಿರುವುದು" ಎಂದು ವಿನಯದಿಂದ ಹೇಳುತ್ತಿದ್ದರು. ಸದ್ಯದ ಸಂಧರ್ಭದಲ್ಲಿ ಅಂಥಹ ವ್ಯಕ್ತಿಗಳು ಎಲ್ಲಿದ್ದಾರೆ. ಸಾರ್ವಜನಿಕ ಜೀವನದಲ್ಲಿರುವ ಬಹುತೇಕ ಗಣ್ಯ ವ್ಯಕ್ತಿಗಳು ಐಷಾರಾಮಿ ಜೀವನದ ವ್ಯಾಮೋಹಕ್ಕೆ ಆಕರ್ಷಿತರಾಗಿದ್ದಾರೆ. ಅವರುಗಳ ಆಸ್ತಿ ಸಂಗ್ರಹ ಕೋಟಿಗಳನ್ನು ಮೀರುತ್ತದೆ. ಅವರ ಮನೆಗಳ ಮುಂದೆ ಐದಾರು ಐಷಾರಾಮಿ ಕಾರಗಳು ಇರುತ್ತದೆ. ಇನ್ನು ಫಾರ್ಮ್ ಹೌಸ್, ತೋಟ ಇತ್ಯಾದಿ ಮಾಮೂಲು. ನನಗೆ ಮಾಧ್ಯಮಗಳ ಮೂಲಕ ತಿಳಿದಿರುವ ಪ್ರಕಾರ, ಬೆಂಗಳೂರಿಗೆ ಪ್ರತಿದಿನ ಕನಿಷ್ಟ ಪಕ್ಷ ನೂರರಿಂದ ನೂರೈವತ್ತು ಅನಾಥ ಮಕ್ಕಳು ವಲಸೆ ಬರುತ್ತಾರೆ. ಇದರ ಜೊತೆಗೆ ಬಸ್ ನಿಲ್ದಾಣಗಳು ಮತ್ತು ಜನಸಂದಣಿಯಿರುವ ರಸ್ತೆಗಳಲ್ಲಿ ಮಗುವನ್ನು ಸೊಂಟದಲ್ಲಿರಿಸಿಕೊಂಡು ಭಿಕ್ಷೆಬೇಡುವ ಮಹಿಳೆಯರನ್ನು ನೋಡಬಹುದು. ಇವರಿಗೆ ಆಶ್ರಯ ಬೇಕು ಆಹಾರ, ವಸತಿ, ತೊಡಲು ಬಟ್ಟೆಬೇಕು. ಇವರನ್ನು ದತ್ತು ಪಡೆದ ಸಲುಹುವ ಆಲೋಚನೆ ಅಗತ್ಯಕಿಂತಲೂ ಹೆಚ್ಚು ಸಂಪತ್ತುಗಳಿಸಿರುವ ಗಣ್ಯರಿಗೆ ಮತ್ತು ಶ್ರೀಮಂತರಿಗೆ ಏಕೆ ಬರುವುದಿಲ್ಲ.

ನಾವು ರೂಪಿಸಿಕೊಂಡಿರುವ ಸಂವಿಧಾನದ ಆಶಯಗಳು ತುಂಬಾ ಚೆನ್ನಾಗಿದೆ. ಬಡವರು, ದಲಿತರು ಮತ್ತು ಹಿಂದುಳಿದ ವರ್ಗದವರಿಗೆ ಸಾಮಾಜಿಕ ನ್ಯಾಯ ಒದಗಿಸುವ ಹಕ್ಕು ಬಾಧ್ಯತೆಗಳನ್ನು ಸಂವಿಧಾನ ನೀಡಿದೆ. ಈ ಆಶಯ ಸ್ವಾತಂತ್ರ್ಯಾನಂತರ ಈ ಆರು ದಶಕಗಳಲ್ಲಿ ಸ್ವಲ್ಪ ಮಟ್ಟಿಗೆ ಜಾರಿಗೆ ಬಂದಿದೆ. ಆದ್ದರಿಂದಲೇ ಏನೋ ಆಳಾಗಿದ್ದವನು ಅರಸನಾಗುತ್ತಾನೆ. ಅರಸರಾಗಿದ್ದವರು ಸಾಮಾನ್ಯ ಪ್ರಜೆಗಳಾಗಿದ್ದಾರೆ. ಇದಕ್ಕೆ ನಮ್ಮ ಮೈಸೂರು ಸಂಸ್ಥಾನದ ಅರಸರನ್ನೇ ಉದಾಹರಿಸಬಹುದು. ಈ ತಿಂಗಳು ನಾಡಹಬ್ಬ ದಸರಾ ಆಚರಣೆ ಮುಗಿದಿದೆ. ಸುಮಾರು ವರ್ಷಗಳ ಹಿಂದೆ ದಸರಾ ಉತ್ಸಹದಲ್ಲಿ ಮೈಸೂರು ಅರಸರು ಅಂಬಾರಿಯಲ್ಲಿ ವಿರಾಜಮಾನರಾಗಿರುತ್ತಿದ್ದರು. ಈಗ ಅಂಬಾರಿಯಲ್ಲಿ ಚಾಮುಂಡೇಶ್ವರಿ ದೇವಿಯನ್ನು ಸ್ಥಾಪಿಸಲಾಗುತ್ತದೆ. ಮೈಸೂರು ಅರಸರ ಮನೆತನದ ದಸರಾ ಆಚರಣೆ ಕೇವಲ ಖಾಸಗಿಯಾಗಿ ಅರಮನೆಯಲ್ಲಷ್ಟೇ ನಡೆಯುತ್ತದೆ. ನಮ್ಮ ಪ್ರಜಾಪ್ರಭುತ್ವದ ಅರ್ಥಪೂರ್ಣವಾದ ಆಶಯಕ್ಕೆ ಮತ್ತೊಂದೆರಡು ಉದಾಹರಣೆ, ಎಂದರೆ ಬಾಲ್ಯದಲ್ಲಿ ಮನೆಮನೆ ಬಾಗಿಲಿಗೆ ದಿನಪತ್ರಿಕೆ ಹಂಚುತ್ತಿದ್ದ ಡಾ॥ ಏಪಿಜೆ ಅಬ್ದುಲ್‌ಕಲಾಂ ತಮ್ಮ ಪ್ರತಿಭೆಯಿಂದ ರಾಷ್ಟ್ರಪತಿ ಹುದ್ದೆಯಲ್ಲಿದ್ದರು... ಇದೇ ರೀತಿ ರೈಲ್ವೆ ನಿಲ್ದಾಣದಲ್ಲಿ ಚಹಾ ಮಾರುತ್ತಿದ್ದ ಎಂದು ಸಾಂಧರ್ಭಿಕವಾಗಿ ಒಪ್ಪಿಕೊಂಡಿರುವ ಪ್ರಧಾನಮಂತ್ರಿ ಶ್ರೀ ನರೇಂದ್ರ ಮೋದಿ ಅವರು ರಾಜಕೀಯ ಅಧಿಕಾರವನ್ನು ಜನರ ಪರವಾಗಿರಿಸಿಕೊಂಡು ಇಂದು ಪ್ರಧಾನಿ ಹುದ್ದೆಯಲ್ಲಿದ್ದಾರೆ. ಅಂದ ಹಾಗೆ ಕಳೆದ ತಿಂಗಳ 16 ರಂದು ಡಾ॥ ಏಪಿಜೆ ಅಬ್ದುಲ್ ಕಲಾಂ ಅವರ 84 ನೇ ಹುಟ್ಟು ಹಬ್ಬವನ್ನು ಇಡೀ ದೇಶದ ಜನತೆ ಸ್ಮರಿಸಿದರು. ಇದಕ್ಕೆ ಅವರು ಸರಳವಾಗಿ ಜನರನ್ನು ಆಕರ್ಷಿಸಿ, ಶಾಲಾ ಮಕ್ಕಳ ಜೊತೆ ಸಂವಾದ ಮಾಡುತ್ತಿದ್ದ ವ್ಯಕ್ತಿತ್ವ ಕಾರಣ. ಇವರು ರಾಷ್ಟ್ರಪತಿಗಳಾಗಿ ನೇಮಕವಾದಾಗ ಎರಡು ಸೂಟ್‌ಕೇಸ್‌ಗಳಲ್ಲಿ ತಮ್ಮ ಬಟ್ಟೆ ಪುಸ್ತಕಗಳ ಜೊತೆ ರಾಷ್ಟ್ರಪತಿಭವನ ಪ್ರವೇಶಿಸಿದರು. ಅವರ ಅಧಿಕಾರದ ಅವಧಿ ಮುಗಿದನಂತರ, ಆ ಎರಡೇ ಎರಡು ಸೂಟ್‌ಕೇಸ್‌ಗಳೊಂದಿಗೆ ರಾಷ್ಟ್ರಪತಿಭವನದಿಂದ ನಿರ್ಗಮಿಸಿದರು. ಅವರಿಗೆ ದೊರೆಯುತ್ತಿದ್ದ ಸಂಬಳ, ಭತ್ಯೆಗಳನ್ನು ದೇಶದಲ್ಲಿರುವ ಮಕ್ಕಳ ಶ್ರೇಯೋಭಿವೃದ್ಧಿಗೆ ಶ್ರಮಿಸುತ್ತಿರುವ "ಅಮೂಲ್" ಸಂಸ್ಥೆಗೆ ದೇಣಿಗೆಯಾಗಿ ನೀಡಿದ್ದರು. ಕಳೆದ ಎರಡು ತಿಂಗಳ ಹಿಂದೆ ಅವರು ನಮ್ಮೊಂದಿಗೆ ಇದ್ದರು, ಈಗ ಅವರು ನಮ್ಮೊಂದಿಗೆ ಇಲ್ಲ. ಈಗವರು ನಮ್ಮ ನೆನಪಿನ ಒಂದು ಭಾಗ ಮಾತ್ರ. ಶ್ರಾದ್ಧ, ತಿಥಿ, ಪಕ್ಷ, ಮಹಾಲಯಅಮಾವಸ್ಯೆಯ ಆಚರಣೆ ನಮ್ಮ ಹಿರಿಯರನ್ನು ಸ್ಮರಿಸಿ ಅವರ ಮೌಲ್ಯಗಳನ್ನು ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳ ಬೇಕು. ಆಗ ಮಾತ್ರ ಈ ಹಬ್ಬಕ್ಕೂ ಒಂದು ಅರ್ಥ ಬರುತ್ತದೆ. ನನಗೆ ಯಾವಾಗಲೂ ಡಾ॥ ಏಪಿಜೆ ಅಬ್ದುಲ್ ಕಲಾಂ ಅವರು ಹೇಳುತ್ತಿದ್ದ ಒಂದು ಮಾತು ನೆನಪಿಗೆ ಬರುತ್ತಿದೆ. ಅದು "Working hands never go hungry" ಎಂಬುದು. ಅಂದರೆ "ದುಡಿದು ಬದುಕಬೇಕು ಎಂದು ಹಂಬಲಿಸುವವರ ಬಳಿಗೆ ಹಸಿವು ಕಾಡುವುದಿಲ್ಲ" ಎಂದು.ಇದು ನಮ್ಮ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಧ್ಯೇಯವಾಗಿರಲಿ ಎಂದು ಬಯಸುತ್ತೇನೆ.

ಸ್ಕೌಟ್ಸ್-ಗೈಡ್ಸ್ ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ

ಸಿದ್ದಯ್ಯ

ರಾಜ್ಯ ಕಾರ್ಯದರ್ಶಿ

# ಶಿಕ್ಷಕರಿಗೊಂದು ಸಂಕಲ್ಪ ಸಂಹಿತೆ

**ಗೊ.ರು. ಚನ್ನಬಸಪ್ಪ**
ಅಧ್ಯಕ್ಷರು, ಪ್ರಕಟಣಾ ಸಮಿತಿ
ಭಾರತ್ ಸ್ಕೌಟ್ಸ್-ಗೈಡ್ಸ್, ಕರ್ನಾಟಕ

ಶಿಕ್ಷಣದ ಆಶಯ ವಿದ್ಯಾರ್ಥಿಗಳಲ್ಲಿ ಜೀವನ ಪ್ರಜ್ಞೆಯನ್ನು ಅರಳಿಸುವುದು.ಈ ದೃಷ್ಟಿಯಲ್ಲಿ ನಮಗೆ ಬೇಕಾಗಿರುವುದು ಅನುಕರಣೆಯ ಶಿಕ್ಷಣವಲ್ಲ; ಅನುಭವದ ಶಿಕ್ಷಣ. ಜಾಣ್ಮೆಯ ಶಿಕ್ಷಣವಲ್ಲ; ಜೀವನ ಶಿಕ್ಷಣ, ವಿದ್ವತ್ತಿನ ಶಿಕ್ಷಣವಲ್ಲ; ವಿವೇಕದ ಶಿಕ್ಷಣ. ಉಪಾಯದ ಶಿಕ್ಷಣವಲ್ಲ; ಉಪಯುಕ್ತ ಶಿಕ್ಷಣ. ನಮ್ಮ ಬೋಧನೆಗೆ ಬದುಕಿನ ಸ್ಪರ್ಶವಿರಬೇಕು. ಸಂಸ್ಕೃತಿಯ ಸಂಸ್ಕಾರವಿರಬೇಕು. ವಿದ್ಯಾರ್ಥಿಗಳಲ್ಲಿ ಕೇವಲ ವಿಷಯ ತುರುಕಬಾರದು; ವಿವೇಚನೆ ತುಂಬಬೇಕು. ನಾವು ವಿದ್ಯಾರ್ಥಿಗಳಲ್ಲಿ ಮುಖ್ಯವಾಗಿ ವಿಕಾಸಗೊಳಿಸಬೇಕಾದದ್ದು ಜೀವನ ಶ್ರದ್ಧೆ ಮತ್ತು ಮಾನವ ಪ್ರೇಮಗಳನ್ನು. ಶಿಕ್ಷಣ ತಜ್ಞರು ಹೇಳುವಂತೆ ನಾವು ನೀಡುವ ಶಿಕ್ಷಣ ಹೊರಗಿನಿಂದ ಬಿಡುವ ಬೆಳಕಾಗಬಾರದು; ಒಳಗಿರುವುದನ್ನು ಪ್ರಕಾಶಗೊಳಿಸುವಂತಿರಬೇಕು.

ಒಂದು ಅರ್ಥಪೂರ್ಣ ಮಾತಿದೆ: "Every new born child is a genius, but schools turn them to block heads" ಎಂದರೆ **"ಹುಟ್ಟುವ ಪ್ರತಿಯೊಂದು ಮಗುವೂ ಪ್ರತಿಭೆಯೊಂದಿಗೇ ಇರುತ್ತದೆ. ಆದರೆ ಶಾಲೆಗಳು ಅದನ್ನು ಪೆದ್ದುಗೊಳಿಸುತ್ತವೆ"**. ವಾಸ್ತವವಾಗಿ, ಮಕ್ಕಳಲ್ಲಿ ದೈವಶ್ರದ್ಧೆ, ಕರ್ತವ್ಯ ಪ್ರಜ್ಞೆ, ಸಮಯ ಪ್ರಜ್ಞೆ, ಹೊಣೆಗಾರಿಕೆ, ಸಹಕಾರ ಭಾವ, ಪರಧರ್ಮ ಸಹಿಷ್ಣುತೆ, ಕಾಯಕ ನಿಷ್ಠೆ ಸಾಹಸ ಪ್ರವೃತ್ತಿ, ಸ್ನೇಹ ಸಂಪನ್ನತೆ, ಸಹನಾ ಭಾವ, ಪರಿಸರ ಪ್ರೇಮ, ಲೋಕಪ್ರೀತಿ – ಇವೆಲ್ಲಕ್ಕೂ ಮಿಗಿಲಾಗಿ ಆತ್ಮವಿಶ್ವಾಸ ಮತ್ತು ಆತ್ಮಗೌರವ ಗುಣಗಳನ್ನು ಅರಳಿಸಬೇಕು. ಹಾಗೆ ಅರಳಿಸಬೇಕಾದರೆ ಶಿಕ್ಷಕನು ಮೊದಲು ಈ ಎಲ್ಲ ಗುಣಗಳ ಗಣಿಯಾಗಿರಬೇಕು. ಶಿಕ್ಷಕನಾದವನು ಮನಸ್ಸು–ಮಾತು–ಕೃತಿ ಈ ಮೂರರ ಸಾಮರಸ್ಯದ ಸಂಗಮವಾಗಬೇಕು.

'ಶಿಕ್ಷಕ' ಎನ್ನುವುದನ್ನು ಇಂಗ್ಲಿಷಿನಲ್ಲಿ `Teacher' ಎನ್ನಲಾಗಿದೆ. Teacher ಎಂಬ ಶಬ್ದದಲ್ಲಿ ಏಳು ಅಕ್ಷರಗಳಿವೆ. ಆ ಒಂದೊಂದು ಅಕ್ಷರವೂ ಒಂದೊಂದು ಲಕ್ಷಣವನ್ನು ಹೇಳುತ್ತದೆ. T ಎನ್ನುವುದು Totality–ಪೂರ್ಣತೆ. E ಎನ್ನುವುದು Eligibility–ಅರ್ಹತೆ. A ಎನ್ನುವುದು Accountability –ಬದ್ಧತೆ. C ಎನ್ನುವುದು Clarity–ಸ್ಪಷ್ಟತೆ. H ಎನ್ನುವುದು Honesty–ಪ್ರಾಮಾಣಿಕತೆ, E ಎನ್ನುವುದು Elasticity–ಪ್ರಫುಲ್ಲತೆ, ಕೊನೆಯ R ಎನ್ನುವುದು Reality–ವಸ್ತುನಿಷ್ಠತೆ, ಇದನ್ನು ಒಂದು ರೀತಿಯಲ್ಲಿ ಸಪ್ತ ಸೂತ್ರಗಳೆಂದರೂ ಸಲ್ಲುತ್ತದೆ.

ಶಿಕ್ಷಕನು ತನ್ನ ವೃತ್ತಿಗನುಗುಣವಾಗಿ ಮೊದಲು ವ್ಯವಹರಿಸಬೇಕಾದದ್ದು ಮಕ್ಕಳೊಡನೆ. ಈ ಮಕ್ಕಳೇನೂ ಸಾಮಾನ್ಯವಲ್ಲ. ಆಸಕ್ತ ಮಕ್ಕಳಿದ್ದಂತೆ ಅನಾಸಕ್ತ ಮಕ್ಕಳೂ ಇರುತ್ತಾರೆ. ಸಾಹಸ ಪ್ರವೃತ್ತಿಯ ಮಕ್ಕಳಿದ್ದಂತೆ ಸೋಮಾರಿತನದ ಮಕ್ಕಳೂ ಇರುತ್ತವೆ. ಚುರುಕು ಬುದ್ಧಿಯ ಮಕ್ಕಳಿದ್ದಂತೆ ಮಂದ ಬುದ್ಧಿಯ ಮಕ್ಕಳೂ ಇರುತ್ತವೆ. ವಿಧೇಯ ಮಕ್ಕಳಿದ್ದಂತೆ ನಿರ್ದಯ ಮಕ್ಕಳೂ ಇರಬಹುದು. ಧೈರ್ಯದ ಮಕ್ಕಳಿರುವಂತೆ ಅಂಜಿಕೆ ಮಕ್ಕಳೂ ಇರುತ್ತಾರೆ. ಆಡುವ ಮಕ್ಕಳಿರುವಂತೆ ಕಾಡುವ ಮಕ್ಕಳೂ ಇರಬಹುದು. ಹೊಡೆದು ಬಡಿದರೂ ಅಳುಕದ ಅಲ್ಲಾಡದ ಮಕ್ಕಳಿರುವಂತೆ, ಮುಟ್ಟಿದರೆ ಸಾಕು ಕಣ್ಣಲ್ಲಿ ಮುಂಗಾರು ಮಳೆ ಕರೆಯುವ ಮಕ್ಕಳೂ ಇರುತ್ತಾರೆ. ಪಾಠಕ್ಕಿಂತ ಆಟವನ್ನೇ ಬಯಸುವ ಕೆಲವು ಮಕ್ಕಳಿದ್ದರೆ, ಇನ್ನು ಕೆಲವರಿಗೆ ಇವೆರಡೂ ಬೇಡವಾಗಿ ಊಟವೊಂದೇ ಪ್ರಿಯವಾಗಿರುವುದುಂಟು. ಕೆಲವು ಮಕ್ಕಳು ಸಾತ್ವಿಕರಿದ್ದರೆ ಮತ್ತೆ ಕೆಲವು ಅಸಭ್ಯವಿರಬಹುದು.

ಯಾವ ಬಗೆಯ ಮಕ್ಕಳೇ ಇರಲಿ, ಅವರ ಶಿಕ್ಷಣಕ್ಕೆ ಮೂರು ರಕ್ಷೆಗಳು ಬೇಕು. ಅತ್ತ ಹೆತ್ತವರು, ಇತ್ತ ಶಿಕ್ಷಕರು ಮತ್ತು ಸುತ್ತಣ ಸಮಾಜ. ಈ ಮೂರೂ ವ್ಯವಸ್ಥೆಗಳಿಂದಲೇ ಮಕ್ಕಳು ಪ್ರಭಾವಿತರಾಗಬೇಕು; ಬದುಕಿನ ಭವಿಷ್ಯದ ಬೆಳಕು ಕಾಣಬೇಕು. ಈ ಮೂರೂ ವರ್ಗದ ವ್ಯಕ್ತಿಗಳಿಗೆ ಪ್ರಕೃತಿ ವಿಶೇಷದ ಪಂಚಭೂತಗಳ ಪ್ರಮಾಣವಿರಬೇಕು. ಎಂದರೆ ಭೂಮಿಯಷ್ಟು ತಾಳ್ಮೆ, ಸುಳಿಯುವ ಗಾಳಿಯಷ್ಟು ಸಮದೃಷ್ಟಿ, ಹರವಿನ ಆಕಾಶದಷ್ಟು ವಿಶಾಲ ಹೃದಯ, ಹರಿಯುವ ನೀರಿನಷ್ಟು ಪರಿಶುದ್ಧತೆ ಮತ್ತು ಉರಿಯುವ ಅಗ್ನಿಯಷ್ಟು ಉಜ್ವಲತೆ ಇರಬೇಕು. ಅವಿದ್ದರೆ ಮಾತ್ರ ಮಕ್ಕಳ ಸಮಗ್ರ ಶಿಕ್ಷಣ ಸಾಧ್ಯವಾಗುತ್ತದೆ. ಈಗ ನಾವೆಲ್ಲ ಹೇಳುತ್ತಿರುವ ಸರ್ವಶಿಕ್ಷಣ ಅಭಿಯಾನ ಅರ್ಥಪೂರ್ಣವಾಗುತ್ತದೆ. ಈ ಹಿನ್ನೆಲೆಯಲ್ಲಿ ನಮ್ಮ ಶಿಕ್ಷಣದ ರೀತಿ–ನೀತಿ, ಸ್ಥಿತಿ–ಗತಿ ಮತ್ತು ಗುರಿ–ಗಮನಗಳ ಬಗೆಗೆ ಗಂಭೀರ ಚಿಂತನೆ ನಡೆಸಬೇಕಾಗಿದೆ.

ಉಳಿದ ತಜ್ಞರು ರಸ್ತೆ, ಸೇತುವೆ, ಜಲಾಶಯ, ಬಹು ಅಂತಸ್ತಿನ ಕಟ್ಟಡ ಇತ್ಯಾದಿಗಳನ್ನು ನಿರ್ಮಿಸಬಹುದು. ಅದ್ಭುತವೆನಿಸುವ ಸಾಧನ–ಸಲಕರಣೆಗಳನ್ನು ಕಂಡು ಹಿಡಿಯಬಹುದು. ಬೃಹತ್ ಯಂತ್ರ ಸ್ಥಾವರಗಳನ್ನು

ಸ್ಥಾಪಿಸಬಹುದು. ಊಹೆಗೂ ನಿಲುಕದ ಸಂಪರ್ಕ–ಸಂವಹನ ತಂತ್ರಗಳನ್ನು ಶೋಧಿಸಬಹುದು. ಇವೆಲ್ಲ ಭೌತಿಕ ಸೌಲಭ್ಯ–ಸವಲತ್ತುಗಳಿಗೆ ಸಂಬಂಧಿಸಿದವು. ಆದರೆ ಇವೆಲ್ಲಕ್ಕಿಂತ ಮೂಲಾಧಾರವಾಗಿ ಇರಬೇಕಾದದ್ದು ನೈತಿಕ ನಿಷ್ಠೆ. ಇದನ್ನು ಎಳೆತನದಲ್ಲೇ ಬೆಳೆಸಲು ಸಾಧ್ಯವಿರುವುದು ಶಿಕ್ಷಕರಿಗೆ ಮಾತ್ರ ಎಂದು ಮತ್ತೆ ಮತ್ತೆ ಹೇಳಬಯಸುತ್ತೇನೆ.

ಈ ದೃಷ್ಟಿಯಿಂದಲೇ, ನಾನು ಶಿಕ್ಷಕರಿಗೆ ಸಂಬಂಧಿಸಿದ ಕಾರ್ಯಕ್ರಮಗಳಿಗೆ ಹೋದಾಗಲೆಲ್ಲ ಶಿಕ್ಷಕರ ಪಂಚಶೀಲಗಳನ್ನು ಪ್ರಸ್ತಾಪಿಸುತ್ತೇನೆ. ಆ ಪಂಚಶೀಲಗಳೆಂದರೆ, ಪ್ರಾಮಾಣಿಕತೆ, ಕ್ರಿಯಾಶೀಲತೆ, ಸಹನಶೀಲತೆ, ಕರ್ತವ್ಯಬದ್ಧತೆ ಮತ್ತು ರಾಷ್ಟ್ರೀಯತೆ. ಇವುಗಳನ್ನು ಶಿಕ್ಷಕರಿಗೆ ವಿವರಿಸಬೇಕಾಗಿಲ್ಲ.

ಈ ಪಂಚಶೀಲಗಳ ಜೊತೆಗೆ ಶಿಕ್ಷಕರು ಪಂಚಸೂತ್ರಗಳನ್ನು ಪಾಲಿಸಬೇಕು. ಆ ಪಂಚ ಸೂತ್ರಗಳೆಂದರೆ – ಆತ್ಮಗೌರವ (Self esteem), ಇತರರ ಬಗೆಗೆ ಪ್ರೀತಿ (Love towards others), ದೇವರಲ್ಲಿ ನಂಬಿಕೆ (Faith in God), ಭವಿಷ್ಯದ ಬಗೆಗೆ ಭರವಸೆ (Hope in the Future) ಮತ್ತು ಕ್ಷಮಾಗುಣ (Forgiveness) ಈ ಸೂತ್ರಗಳನ್ನು ಮೈಗೂಡಿಸಿಕೊಂಡು ಅವನ್ನು ನಮ್ಮ ಸೇವಾ ಹಾದಿಗೆ ದೀಪಗಳನ್ನಾಗಿ ಮಾಡಿಕೊಳ್ಳಬೇಕು. ನಾವು ಎಲ್ಲಿಂದ ಆರಂಭಿಸಿದೆವು ಎನ್ನುವುದು ಅಷ್ಟು ಮುಖ್ಯವಲ್ಲ. ಎಲ್ಲಿಗೆ ಮುಟ್ಟಿದೆವು ಎನ್ನುವುದು ಮುಖ್ಯ.

ಶಿಕ್ಷಕರಿಗೆ ಗುರುಗಳು ಎಂದೇ ಹೆಸರಿದೆ. ಅವರಿಗೆ ಒಂದು ಗೌರವಾನ್ವಿತ ಮತ್ತು ಮಹತ್ವದ ಕ್ಷೇತ್ರದಲ್ಲಿ ಸೇವೆ ಸಲ್ಲಿಸುವ ಅವಕಾಶ ದೊರಕಿದೆ. ಸಹಸ್ರಾರು ಮಕ್ಕಳ ಭವಿಷ್ಯವನ್ನು ರೂಪಿಸುವ ಬಹು ದೊಡ್ಡ ಅವಕಾಶ. ಆದ್ದರಿಂದಲೇ ಶಿಕ್ಷಕ ವೃತ್ತಿ ಇತರೆಲ್ಲ ವೃತ್ತಿಗಳಿಗಿಂತ ಶ್ರೇಷ್ಠ, ಪವಿತ್ರ ಎಂದು ನಾನು ತಿಳಿದಿದ್ದೇನೆ.

ನಾನು ಇದುವರೆಗೆ ಹೇಳಿದ ಮಾತುಗಳನ್ನು ಸಾರಗೊಳಿಸಿ ಇಪ್ಪತ್ತು ಅಂಶಗಳನ್ನು ಶಿಕ್ಷಕರ ಮುಂದಿಡಬಯಸುತ್ತೇನೆ. ಇವು ಶಿಕ್ಷಕರ ಸಂಕಲ್ಪವಾಗಬೇಕು.

1. ನಿಮ್ಮ ವೃತ್ತಿಯ ಬಗೆಗೆ ನಿಮಗೆ ಪೂರ್ಣ ಅಭಿಮಾನವಿರಲಿ.
2. ಶಿಕ್ಷಣ ಸೇವೆ ಪವಿತ್ರವಾದುದು ಎಂಬುದನ್ನು ಮರೆಯದಿರಿ.
3. ಮುಗ್ಧಮಕ್ಕಳಿಗೆ ಜ್ಞಾನದಾನ ಒಂದು ಪುಣ್ಯದ ಕಾರ್ಯ.
4. ನಿಮ್ಮ ಸೇವೆಯಲ್ಲಿ ಅವಿರಳ ಶ್ರದ್ಧೆ ಮತ್ತು ಬದ್ಧತೆಯಿರಲಿ.
5. ಶಿಕ್ಷಕರಿಗೆ ಸಾರ್ವಜನಿಕ ಸಭ್ಯತೆ ಅಪೇಕ್ಷಣೀಯ.
6. ಸರ್ಕಾರ–ಸಾರ್ವಜನಿಕರ ಮಧ್ಯೆ ನೀವೊಂದು ಸೇತುವಿದ್ದಂತೆ.
7. ದೀನ–ದಲಿತರ ಮಕ್ಕಳ ಬಗೆಗೆ ವಿಶೇಷ ಗಮನವಿರಲಿ.
8. ಮಕ್ಕಳಲ್ಲಿ ಪರಿಸರ ಪ್ರಜ್ಞೆಯನ್ನು ಮೂಡಿಸಿ.
9. ಪೋಷಕರಿಗೆ ಅವರ ಹೊಣೆಗಾರಿಕೆಯನ್ನು ಮನವರಿಕೆ ಮಾಡಿ.
10. ನಿಮ್ಮ ಸೇವೆಯಲ್ಲಿ ಎಂದೂ ಉದಾಸೀನ ತಲೆದೋರದಿರಲಿ.
11. ಕಾಲದ ಮಹತ್ವವನ್ನು ಮಕ್ಕಳಲ್ಲಿ ಮೈಗೂಡಿಸಬೇಕು.
12. ಸಂಭಾವನೆಗಿಂತ ಸೇವೆ ಮುಖ್ಯವೆಂಬುದು ನೆನಪಿರಲಿ.
13. ಶಿಕ್ಷಕರ ವೇಷ–ಭೂಷಣಗಳು ತುಂಬ ಸರಳವಾಗಿರಬೇಕು.
14. ಜಾತಿ–ಮತ ಮತ್ತು ರಾಜಕೀಯಗಳಿಂದ ದೂರವಿರಬೇಕು.
15. ತರಗತಿಗೆ ಹೋಗುವ ಮುನ್ನ ಪೂರ್ಣ ಸಜ್ಜಾಗಿರಬೇಕು.
16. 'ಕಲಿಸುತ್ತಲೇ ಕಲಿ' ಎಂಬುದರ ಅರ್ಥ ತಿಳಿದಿರಬೇಕು, ದಿನಚರಿ ಬರೆಯಬೇಕು.
17. ಸೇವೆ ಸಲ್ಲಿಸುವ ಸಂಸ್ಥೆಯ ಆಸ್ತಿ–ಪಾಸ್ತಿಗಳ ಧರ್ಮದರ್ಶಿಗಳಂತಿರಬೇಕು.
18. ಯಾವ ಕಾರಣಕ್ಕೂ ತಾಳ್ಮೆಯನ್ನು ಕಳೆದುಕೊಳ್ಳಬಾರದು.
19. ಮಕ್ಕಳಲ್ಲಿ ಮುಖ್ಯವಾಗಿ ರಾಷ್ಟ್ರೀಯ ದೃಷ್ಟಿ ಬೆಳೆಸಬೇಕು.
20. ನಿತ್ಯವೂ ಆತ್ಮನಿರೀಕ್ಷೆ ಮಾಡಿಕೊಳ್ಳಬೇಕು.

ಈ ಅಂಶಗಳು ಕೇವಲ ಸಾಂಕೇತಿಕ. ಶಿಕ್ಷಕರ ಸೇವಾನುಭವವೇ ಮಾರ್ಗದರ್ಶಕ!

ನಾನು ಇದುವರೆಗೆ ಹೇಳಿದ ಮಾತುಗಳು 'ಕೊಳಲ ಮೇಲೆ ಸುಳಿದ ಗಾಳಿಯಂತಾಗಬಾರದು. ಕೊಳಲ ಒಳಗೆ ಇಳಿದು ಮಧುರ ದನಿಯಾಗಿ ಹೊಮ್ಮಬೇಕು'. ಅದು ನನ್ನ ಬಿನ್ನಹ.

# ರಾಜ್ಯ ವಾರ್ತೆಗಳು . . . . .

## ರಾಜ್ಯಮಟ್ಟದ ಆಜೀವ ಸದಸ್ಯರ ಸಮಾವೇಶ

ದಿನಾಂಕ 27-09-2015 ರಂದು ಒನಕೆ ಓಬವ್ವ ಜಿಲ್ಲಾ ಕ್ರೀಡಾಂಗಣ ಸಂಕೀರ್ಣ ಸಭಾಭವನ, ಚಿತ್ರದುರ್ಗ, ಇಲ್ಲಿ ರಾಜ್ಯ ಮಟ್ಟದ ಆಜೀವ ಸದಸ್ಯರ ಸಮಾವೇಶವನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ, ಬೆಂಗಳೂರು ಹಾಗು ಜಿಲ್ಲಾ ಸಂಸ್ಥೆ ಚಿತ್ರದುರ್ಗ ಮತ್ತು ಸಾರ್ವಜನಿಕ ಶಿಕ್ಷಣ ಇಲಾಖೆ, ಚಿತ್ರದುರ್ಗ ಇವರ ಸಹಯೋಗದೊಂದಿಗೆ ಆಯೋಜಿಸಲಾಗಿತ್ತು. ಸಮಾರಂಭದ ಉದ್ಘಾಟನೆಯನ್ನು ಚಿತ್ರದುರ್ಗ ಲೋಕಸಭಾ ಸದಸ್ಯರಾದ ಮಾನ್ಯಶ್ರೀ ಬಿ.ಎನ್. ಚಂದ್ರಪ್ಪರವರು ನೆರವೇರಿಸಿ, ಸ್ಕೌಟ್-ಗೈಡ್ ಚಳವಳಿಗೆ ಶುಭ ಹಾರೈಸಿದರು. ಡಾ॥ ಗೊ.ರು. ಚನ್ನಬಸಪ್ಪ, ಅಧ್ಯಕ್ಷರು, ರಾಜ್ಯಪ್ರಕಟಣಾ ಸಮಿತಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ, ಇವರು ಅಧ್ಯಕ್ಷತೆ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಉಪಾಧ್ಯಕ್ಷರು, ಶ್ರೀ ಎಂ. ರೇವಣಸಿದ್ಧಪ್ಪ, ಜಿಲ್ಲಾ ಮುಖ್ಯ ಆಯುಕ್ತರು ಚಿತ್ರದುರ್ಗ, ಶ್ರೀಮತಿ ನಾಗವೇಣಿ, ಉಪನಿರ್ದೇಶಕರು, ಸರ್ಕಾರಿ ಪದವಿ ಪೂರ್ವ ಶಿಕ್ಷಣ ಇಲಾಖೆ, ಚಿತ್ರದುರ್ಗ, ಶ್ರೀ ಡಿ. ಬೋರಪ್ಪ, ಅಧ್ಯಕ್ಷರು, ಮದಕರಿನಾಯಕ ವಿದ್ಯಾ ಸಂಸ್ಥೆ, ಚಿತ್ರದುರ್ಗ, ಅವರುಗಳು ಮಾತನಾಡಿದರು. ಈ ಸಂದರ್ಭದಲ್ಲಿ, ಬಂಜಾರ ಅಭಿವೃದ್ಧಿ ನಿಗಮದ ಅಧ್ಯಕ್ಷೆ ಶ್ರೀಮತಿ ಜಲಜಾನಾಯ್ಕ್ ರವರು ಆಗಮಿಸಿ ಮಾತನಾಡಿದರು. ಶ್ರೀ ಸಿ.ಎಸ್. ರೆಡ್ಡಿ, ಜಂಟಿ ರಾಜ್ಯ ಕಾರ್ಯದರ್ಶಿಗಳು, ರಾಜ್ಯ ಪದಾಧಿಕಾರಿಗಳು, ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರುಗಳಾದ ಶ್ರೀಮತಿ ಸುಜಯಾ ಪ್ರಕಾಶ್, ಶ್ರೀಮತಿ ಹೇಮಂತಿನಿ ಪ್ರಕಾಶ್, ಶ್ರೀ ಎಂ.ಕೆ ತಾಜ್‌ಪೀರ್ ಹಾಗೂ ಇತರೆ ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು. ಶ್ರೀ ಎಂ.ಆರ್. ನಾರಾಯಣಪ್ಪ, ಶ್ರೀ ಶ್ರೀನಿವಾಸಶೆಟ್ಟಿ, ಶ್ರೀ ಧನಪಾಲ್, ಶ್ರೀ ಎ.ಬಿ. ವಾರದ ಇವರುಗಳನ್ನು ಇದೇ ಸಂದರ್ಭದಲ್ಲಿ ಸನ್ಮಾನಿಸಲಾಯಿತು.

ಶ್ರೀಮತಿ ಎಸ್.ಕೆ. ಪ್ರಭಾ, ರಾಜ್ಯ ಜಂಟಿ ಕಾರ್ಯದರ್ಶಿಗಳು ಪ್ರಾಸ್ತಾವಿಕ ನುಡಿ ನುಡಿದರು. ಶ್ರೀ ಬಿ.ಎ. ಲಿಂಗಾರೆಡ್ಡಿ, ಜಿಲ್ಲಾ ಕಾರ್ಯದರ್ಶಿ ಸ್ವಾಗತಿಸಿದರು. ಶ್ರೀಮತಿ ಜಯಶೀಲಾ ಮಹೇಶ್ವರಪ್ಪ ಜಿಲ್ಲಾ ಆಯುಕ್ತರು (ಗೈಡ್ಸ್) ಕಾರ್ಯಕ್ರಮ ನಿರೂಪಿಸಿದರು.

### ಕೊಂಡಜ್ಜಿ ಬಸಪ್ಪ ಜನ್ಮಶತಮಾನೋತ್ಸವ ಸ್ಮರಣಾರ್ಥ ರಾಜ್ಯ ಮಟ್ಟದ ಆಜೀವ ಸದಸ್ಯರುಗಳ ಸಮಾವೇಶ

ದಿನಾಂಕ 03-10-2015 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆ ಹಾಗೂ ಬೆಂಗಳೂರು ಉತ್ತರ ಜಿಲ್ಲಾ ಸಂಸ್ಥೆಯ ಸಹಯೋಗದೊಂದಿಗೆ ರಾಜ್ಯಮಟ್ಟದ ಆಜೀವ ಸದಸ್ಯರುಗಳ ಸಮಾವೇಶವನ್ನು ರಾಜ್ಯ ಕೇಂದ್ರ ಕಾರ್ಯಾಲಯದಲ್ಲಿ ಹಮ್ಮಿಕೊಳ್ಳಲಾಗಿತ್ತು.

ಸಮಾವೇಶದ ಉದ್ಘಾಟನೆಯನ್ನು ಶ್ರೀ ಶ್ರೀ ಯತಿರಾಜ್ ಜೀಯರ್ ಸ್ವಾಮಿಗಳು, ಶ್ರೀ ಯತಿರಾಜಮಠ, ಮೇಲುಕೋಟೆ ಇವರು ಜ್ಯೋತಿ ಬೆಳಗಿಸುವುದರ ಮೂಲಕ ನೆರವೇರಿಸಿ ಮಾತನಾಡುತ್ತ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ಅಂತರರಾಷ್ಟ್ರೀಯ ಸಂಸ್ಥೆಯಾಗಿ ಬೆಳೆಯುತ್ತಿದ್ದು, ಯುವಕ-ಯುವತಿಯರಲ್ಲಿ ದೈವಭಕ್ತಿ, ಸೇವಾಭಾವನೆ, ರಾಷ್ಟ್ರಪ್ರೇಮ ಹಾಗೂ ಮೌಲ್ಯಾಧಾರಿತ ಶಿಕ್ಷಣವನ್ನು ನೀಡುತ್ತಿದೆ. ಮಕ್ಕಳಲ್ಲಿ ಉತ್ತಮ ನೈತಿಕ ಮೌಲ್ಯಗಳನ್ನು ಬೆಳೆಸಲು ಶ್ರಮಿಸುತ್ತಿದೆ ಮತ್ತು ಇಂತಹ ಸಂಸ್ಥೆಯಲ್ಲಿ ಶ್ರೀ ಸಿದ್ದಯ್ಯ, ಭಾ.ಆ.ಸೇ(ನಿ) ಹಾಗೂ ಶ್ರೀ ಪಿ.ಜಿ.ಆರ್. ಸಿಂಧ್ಯ ರವರು ಸೇವೆ ಸಲ್ಲಿಸುತ್ತಿರುವುದು ಸಂಸ್ಥೆಯ ಬೆಳವಣಿಗೆಗೆ ಸಹಕಾರಿಯಾಗಿದೆ ಎಂದು ತಿಳಿಸಿದರು.

ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಸಿದ್ದಯ್ಯರವರು ಮುಖ್ಯ ಅತಿಥಿಯಾಗಿ ಸಮಾರಂಭದಲ್ಲಿ ಉಪಸ್ಥಿತರಿದ್ದು ಮಾತನಾಡಿ ಬದಲಾದ ಕಾಲಕ್ಕೆ ತಕ್ಕಂತೆ ನಮ್ಮ ಸಂಸ್ಥೆಯ ಕಾರ್ಯಚಟುವಟಿಕೆಗಳ ಶೈಲಿಯಲ್ಲೂ ಬದಲಾಗಬೇಕಾಗಿದೆ ಎಂದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಮತ್ತು ರಾಷ್ಟ್ರೀಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ಸದಸ್ಯರಾದ ಶ್ರೀ ಮೋಹನ್ ಕೊಂಡಜ್ಜಿ ಸಮಾರಂಭದಲ್ಲಿ ಉಪಸ್ಥಿತರಿದ್ದರು. ಸಮಾರಂಭದಲ್ಲಿ ಅಧ್ಯಕ್ಷತೆ ವಹಿಸಿದ್ದ ಕೊಂಡಜ್ಜಿ ಬಸಪ್ಪ ಜನ್ಮ ಶತಮಾನೋತ್ಸವ ಸಮಿತಿಯ ಅಧ್ಯಕ್ಷರಾದ ಹಾಗೂ ಸಹಾಯಕ ರಾಜ್ಯ ಆಯುಕ್ತರು ಸ್ಕೌಟ್ (ಪ್ರಕಟಣೆ) ಆದ ಡಾ. ಗೊ.ರು. ಚನ್ನಬಸಪ್ಪ ರವರು "ಸ್ವಯಂಸೇವೆ" ಎಂಬ ವಿಷಯವಾಗಿ ಉಪನ್ಯಾಸ ನೀಡಿದರು.

ಸಮಾರೋಪ ಸಮಾರಂಭದಲ್ಲಿ ಸನ್ಮಾನ್ಯ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಆಜೀವ ಸದಸ್ಯರೊಂದಿಗೆ ಮುಕ್ತವಾಗಿ ಸಂವಾದ ನಡೆಸಿ ಮಾತನಾಡುತ್ತಾ ಮೂರುವರೆ ಲಕ್ಷದಷ್ಟಿರುವ ಸ್ಕೌಟ್ಸ್-ಗೈಡ್ಸ್ ಸಂಖ್ಯೆಯನ್ನು ಮುಂದಿನ 2 ವರ್ಷದಲ್ಲಿ 10 ಲಕ್ಷಕ್ಕೆ ಏರಿಸಲು ಗುರಿಯನ್ನು ಹೊಂದಲಾಗಿದ್ದು ಸಾಮಾಜಿಕ ಜಾಲತಾಣಗಳನ್ನು ಬಳಸಿ ಸ್ಕೌಟ್ಸ್-ಗೈಡ್ಸ್‌ನ ಬಗ್ಗೆ ವಿದ್ಯಾರ್ಥಿಗಳಲ್ಲಿ

ಅರಿವು ಮೂಡಿಸಿ ತರಬೇತಿಯ ಗುಣಮಟ್ಟವನ್ನು ಹೆಚ್ಚಿಸಲು ಪ್ರಯತ್ನಿಸಲಾಗುವುದು ಎಂದರು. ಮುಖ್ಯ ಅತಿಥಿಗಳಾಗಿ ಶ್ರೀ ಎಂ.ಎ. ಖಾಲಿದ್, ರಾಜ್ಯ ಆಯುಕ್ತರು (ಸ್ಕೌಟ್) ಹಾಗೂ ಅಂತರರಾಷ್ಟ್ರೀಯ ಆಯುಕ್ತರು (ಸ್ಕೌಟ್) ಉಪಸ್ಥಿತರಿದ್ದು, ಆಜೀವ ಸದಸ್ಯರು ಸ್ವಪ್ರೇರಣೆಯಿಂದ ಮುಂದೆ ಬಂದು ಸಂಸ್ಥೆಯಲ್ಲಿ ಸೇವೆ ಸಲ್ಲಿಸಬೇಕೆಂದರು. ಇನ್ನೋರ್ವ ಅತಿಥಿಯಾಗಿ ಮಾತನಾಡಿದ ಶ್ರೀಮತಿ ಗೀತಾ ನಟರಾಜ್ ರಾಜ್ಯ ಆಯುಕ್ತರು (ಗೈಡ್ಸ್) ಮಾತನಾಡಿ ಒಂದು ಬಾರಿ ಸ್ಕೌಟ್-ಗೈಡ್ ಆದವರು ಜೀವನದ ಉದ್ದಕ್ಕೂ ಸ್ಕೌಟ್-ಗೈಡ್ ಎಂಬುದನ್ನು ನೆನಪಿಡಬೇಕು ಹಾಗೂ ಸ್ಕೌಟ್ಸ್-ಗೈಡ್ಸ್‌ನ ಉದಾತ್ತವಾದ ತತ್ವಗಳನ್ನು ಜಿವನದಲ್ಲಿ ಅಳವಡಿಸಿಕೊಳ್ಳಬೇಕೆಂದು ತಿಳಿಸಿದರು.

ಸಮಾರಂಭದಲ್ಲಿ ಶ್ರೀಮತಿ ಪಿ. ಸರೋಜ, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಪ್ರೇಂ ಕುಮಾರ್, ಜಿಲ್ಲಾ ಆಯುಕ್ತರು (ಸ್ಕೌಟ್) ಶ್ರೀಮತಿ ವನಿತಾ ನಾರಾಯಣ, ಜಿಲ್ಲಾ ಆಯುಕ್ತರು (ಗೈಡ್) ಶ್ರೀ ಬಿ.ಕೆ. ಶೇಷಾದ್ರಿ, ಜಿಲ್ಲಾ ಕಾರ್ಯದರ್ಶಿ, ರಾಜ್ಯ ಜಂಟಿ ಕಾರ್ಯದರ್ಶಿಗಳಾದ ಶ್ರೀ ಸಿ.ಎಸ್. ರೆಡ್ಡಿ ಮತ್ತು ಶ್ರೀಮತಿ ಎಸ್.ಕೆ. ಪ್ರಭಾ, ರಾಜ್ಯ ಹಾಗು ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು. ಸಮಾವೇಶದಲ್ಲಿ 60 ಕ್ಕೂ ಹೆಚ್ಚು ಆಜೀವ ಸದಸ್ಯರುಗಳು ಭಾಗವಹಿಸಿದ್ದರು.

**ರಾಜ್ಯಮಟ್ಟದ ರೋವರ್ಸ್-ರೇಂಜರ್ಸ್‌ಗಳ ಸಮುದಾಯ ಸೇವಾ ಶಿಬಿರ**

ದಿ|| ಕೊಂಡಜ್ಜಿ ಬಸಪ್ಪನವರ ಜನ್ಮ ಶತಮಾನೋತ್ಸವದ ಪ್ರಯುಕ್ತ ರಾಜ್ಯಮಟ್ಟದ ರೋವರ್ಸ್-ರೇಂಜರ್ಸ್ ಸಮುದಾಯ ಸೇವಾ ಶಿಬಿರವನ್ನು ಶ್ರೀ ಬೋಳಮಂಡಿ ತಿಪ್ಪಮ್ಮಸ್ವಾಮಿ ದೇವಸ್ಥಾನ, ಬೋಳಮಾನದೊಡ್ಡಿ ತಾ||ಜಿ|| ರಾಯಚೂರು ಇಲ್ಲಿ ದಿನಾಂಕ 19 ರಿಂದ 23 ಸೆಪ್ಟಂಬರ್ 2015 ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆ ಮತ್ತು ರಾಯಚೂರು ಜಿಲ್ಲಾ ಸಂಸ್ಥೆ ಇವರ ಜಂಟಿ ಆಶ್ರಯದಲ್ಲಿ ಸಂಘಟಿಸಲಾಯಿತು.

ಶಿಬಿರದ ಉದ್ಘಾಟನಾ ಸಮಾರಂಭವು ದಿನಾಂಕ 19-09-2015 ರಂದು ಶ್ರೀ ಅಮರೇಗೌಡ ಪಾಟೀಲ್, ಜಿಲ್ಲಾ ಆಯುಕ್ತರು(ಸ್ಕೌ) ರವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀ ನಾಗರೆಡ್ಡಿ, ಉಪಾಧ್ಯಕ್ಷರು, ಶ್ರೀ ಬೋಳಮಂಡಿ ತಿಮ್ಮಪ್ಪಸ್ವಾಮಿ ದೇವಸ್ಥಾನ ಇವರು ದೀಪ ಬೆಳಗಿಸಿ ಶಿಬಿರವನ್ನು ಉದ್ಘಾಟಿಸಿದರು. ಶ್ರೀಎ.ಎಮ್. ಶಂಕರ್, ಎಲ್.ಟಿ.(ಆರ್.) ರೋವರ್ ವಿಭಾಗದ ನಾಯಕರು ಶಿಬಿರದ ಮುನ್ನೋಟ ನೀಡಿದರು. ಡಾ|| ಶಿಲಾಕುಮಾರಿ ದಾಸ್‌ರವರು "ಯುವಕರು ಮತ್ತು ಸಮುದಾಯ ಸ್ವಚ್ಛತೆ" ಬಗ್ಗೆ ಮಾತನಾಡಿದರು. ಶ್ರೀ ಪ್ರಭಾಕರ್ ಭಟ್, ಸಹಾಯಕ ರಾಜ್ಯ ಸಂಘಟನಾ ಆಯುಕ್ತರು(ಸ್ಕೌ) ಮಂಗಳೂರು ಇವರು ಸ್ಕೌಟಿಂಗ್-ಗೈಡಿಂಗ್‌ನ ಉದ್ದೇಶ, ತತ್ವಗಳು ಪದ್ಧತಿ ಬಗ್ಗೆ ತಿಳಿಸಿದರು. ರೇಂಜರ್ ವಿಭಾಗದ ನಾಯಕಿ ಶ್ರೀಮತಿ ಮಲ್ಲೇಶ್ವರಿ, ರೇಂಜರಿಂಗ್ ಬಗ್ಗೆ ಮಾಹಿತಿ ನೀಡಿದರು. ಶ್ರೀ ವೆಂಕಟೇಶ ಪಾಟೀಲ್ ಉಪಾಧ್ಯಕ್ಷರು ಸ್ಥಳೀಯ ಸಂಸ್ಥೆ, ರಾಯಚೂರು ಇವರು ಮಾತನಾಡಿ ಇಂತಹ ಶಿಬಿರಗಳು ವಿದ್ಯಾರ್ಥಿಗಳ ಸರ್ವಾಂಗೀಣ ಅಭಿವೃದ್ಧಿಗೆ ಪೂರಕವಾಗಿದೆ ಎಂದು ತಿಳಿಸಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಹೆಚ್. ಹನುಮಂತಪ್ಪ, ಜಿಲ್ಲಾ ಖಜಾಂಚಿ ಶ್ರೀಮತಿ ಕೆ. ಆಲಿಯಾಖಾನಂ, ಜಿಲ್ಲಾ ತರಬೇತಿ ಆಯುಕ್ತರು (ಸ್ಕೌ) ಶ್ರೀ ಆರ್. ಹೆಚ್. ಸಾಗರ್ ಸಮಾರಂಭದಲ್ಲಿ ಉಪಸ್ಥಿತರಿದ್ದರು. ಶ್ರೀಮತಿ ಕಮಲಾ ಸಂಪತ್ ಕುಮಾರಿ ಜಿಲ್ಲಾ ಸಹಾಯಕ ಆಯುಕ್ತರು(ಗೈ) ಇವರು ಸ್ವಾಗತಿಸಿದರು. ಸ್ಕೌಟ್ ಮಾಸ್ಟರ್ ಶ್ರೀ ದೇವಿಂದ್ರ ಕಟ್ಟಮನಿ ವಂದಿಸಿದರು. ಜಿಲ್ಲಾ ಸಂಘಟನಾ ಆಯುಕ್ತರು(ಸ್ಕೌ) ಶ್ರೀ ರಾವುತರಾವ್ ಬರೂರ ಇವರು ಕಾರ್ಯಕ್ರಮ ನಿರ್ವಹಿಸಿದರು. ಇದೇ ಸಂದರ್ಭದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಇವರ 67ನೇ ಹುಟ್ಟು ಹಬ್ಬವನ್ನು ಎಲ್ಲ ಶಿಬಿರಾರ್ಥಿಗಳಿಗೆ ಸಿಹಿ ನೀಡಿ ಆಚರಿಲಾಯಿತು.

ಈ ಸಮುದಾಯ ಸೇವಾ ಶಿಬಿರದಲ್ಲಿ ರಾಜ್ಯದ 14 ಜಿಲ್ಲೆಗಳಿಂದ 113 ರೋವರ್ಸ್ ವಿದ್ಯಾರ್ಥಿಗಳು 66 ರೇಂಜರ್ಸ್ ವಿದ್ಯಾರ್ಥಿನಿಯರು, 16 ಉಪನ್ಯಾಸಕರು ಭಾಗವಹಿಸಿದ್ದರು. ಶಿಬಿರದಲ್ಲಿ ಶ್ರೀ ಬೋಳಮಂಡಿ ತಿಮ್ಮಪ್ಪ ಸ್ವಾಮಿ ದೇವಸ್ಥಾನದ ಪರಿಸರ ಸ್ವಚ್ಛತೆ ಹಾಗೂ ದೇವಸ್ಥಾನದ ಕೆರೆ ಮತ್ತು ಭಾವಿಯನ್ನು ಶುದ್ಧೀಕರಣ ಮಾಡಲಾಯಿತು. 150 ಸಸಿಗಳನ್ನು ದೇವಸ್ಥಾನದ ಸುತ್ತ-ಮುತ್ತ ಹಾಗೂ ರಸೆ ಬದಿಗಳಲ್ಲಿ ನೆಡಲಾಯಿತು. ಊರ ಶಾಲ ಪರಿಸರದಲ್ಲಿ ಶುಚಿತ್ವ ಕಾರ್ಯಕ್ರಮ ಸಂಘಟಿಸಲಾಯಿತು. ಶಿಬಿರದ ಸಮಾರೋಪ ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಶ್ರೀ ಎಸ್. ಸಸಿಕಾಂತ್ ಸೆಂಥಿಲ್ ಭಾ.ಆ.ಸೇ. ಜಿಲ್ಲಾಧಿಕಾರಿಗಳು ಹಾಗು ಅಧ್ಯಕ್ಷರು, ಭಾ. ಸ್ಕೌ & ಗೈ ಜಿಲ್ಲಾ ಸಂಸ್ಥೆ ರಾಯಚೂರು ಇವರು ಭಾಗವಹಿಸಿ, ಭಾಗವಹಿಸಿದ ಎಲ್ಲ ಜಿಲ್ಲೆಗಳ ರೋವರ್ಸ್-ರೇಂಜರ್ಸ್‌ಗಳಿಗೆ ಸ್ಮರಣಿಕೆ ನೀಡಿ ಗೌರವಿಸಿದರು. ರೋವರ್ಸ್-ರೇಂಜರ್ಸ್‌ಗಳು ಶ್ರಮದಾನದ ಮೂಲಕ ದೇವಸ್ಥಾನದ ಪರಿಸರ, ಬಾವಿ, ಶಾಲಾ ವಠಾರ ಶುಚಿಗೊಳಿಸಿ ವನಮಹೋತ್ಸವ ಸಂಘಟಿಸಿದ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದರು. ಅತಿಥಿಗಳಾಗಿ ಭಾಗವಹಿಸಿ ಮಾತನಾಡಿದ ಶ್ರೀ ಎಸ್.ಎಸ್. ಕುಂಬಾರ, ಉಪನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ರಾಯಚೂರು ಇವರು

ಹುಟ್ಟಿನಿಂದ ನಾಯಕರಾಗುವುದಿಲ್ಲ ಉತ್ತಮ ಕೌಶಲ್ಯ, ಜ್ಞಾನ, ಸಚ್ಚಾರಿತ್ರ್ಯ, ತರಬೇತಿಗಳಿಂದ ನಾಯಕತ್ವದ ಗುನ ಬೆಳೆಸಿಕೊಂಡು ಸಾಧ್ಯವಾದಷ್ಟು ವಿದೇಶಗಳಲ್ಲಿರುವಂತೆ ನಮ್ಮ ದೇಶದ ನಾಗರಿಕರು ಪರಿಸರ ಸ್ವಚ್ಛತೆಗೆ ಹೆಚ್ಚಿನ ಮಹತ್ವ ನೀಡಬೇಕೆಂದು ತಿಳಿಸಿದರು.

ಅಧ್ಯಕ್ಷತೆ ವಹಿಸಿ ಮಾತನಾಡಿದ ಶ್ರೀ ಕೆ. ತಿಮ್ಮಯ್ಯ ಜಿಲ್ಲಾ ಮುಖ್ಯ ಆಯುಕ್ತರು, ರಾಜ್ಯಮಟ್ಟದ ಶಿಬಿರಕ್ಕೆ ಸಹಕರಿಸಿದವರನ್ನು ಅಭಿನಂದಿಸಿ, ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಇಂತಹ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ ಎಂದರು. ಈ ಸಂದರ್ಭದಲ್ಲಿ ದೇವಸ್ಥಾನ ಸಮಿತಿಯ ಅಧ್ಯಕ್ಷರಾದ ಶ್ರೀ ಗುಲ್ದಾಸ್ ಸಂಜೀವ್ ರೆಡ್ಡಿ, ಶ್ರೀ ನಾಗರೆಡ್ಡಿ ಮಾಲಿಪಾಟೀಲ್, ಶ್ರೀಮತಿ ಪದ್ಮಾವತಿ ನರಸಿಂಹಲು ಗ್ರಾ.ಪಂ. ಅಧ್ಯಕ್ಷರು, ಶ್ರೀ ಬೋಳಮಂಡಿ ಕಟ್ಟಿಮನಿ, ಶ್ರಿಮತಿ ಸುಜಾತಾ ನರಸಿಂಹಲು ಗ್ರಾಂ.ಪಂ.ಸದಸ್ಯರು, ಉಪಸ್ಥಿತರಿದ್ದರು.

ದಿನಾಂಕ 22-09-2015 ರಂದು ಭವ್ಯ ಶಿಬಿರಾಗ್ನಿ ಕಾರ್ಯಕ್ರಮವನ್ನು ಜಿಲ್ಲಾ ಆಯುಕ್ತರು(ಸ್ಕೌ) ಶ್ರೀ ಅಮರೇಗೌಡ ಪಟೀಲ್ ಉದ್ಘಾಟಿಸಿದರು. ದಿನಾಂಕ : 23-09-2015 ರಂದು ಬೆಳಗ್ಗೆ ಸರ್ವಧರ್ಮ ಪ್ರಾರ್ಥನೆ ಸಂಘಟಿಸಲಾಯಿತು. ಶ್ರೀ ಶಿವಾಚಾರ್ಯ ಮಹಾಸ್ವಾಮಿಗಳು, ಕಿಲ್ಲೇದ ಮಠ ರಾಯಚೂರು ಸಾನಿಧ್ಯ ವಹಿಸಿ ಆಶೀರ್ವಚನ ನೀಡಿದರು.

ರೋವರ್ ವಿಭಾಗದಲ್ಲಿ ಶ್ರೀ ಎ.ಎಮ್. ಶಂಕರ್, ಎಲ್.ಟಿ.(ರೋ) ನಾಯಕರಾಗಿ ಹಾಗೂ ಶ್ರೀಮತಿ ಮಲ್ಲೇಶ್ವರಿ ರೇಂಜರ್ ವಿಭಾಗದ ನಾಯಕರಾಗಿ ಕಾರ್ಯ ನಿರ್ವಹಿಸಿದರು. ಶ್ರೀ ಟಿ.ಎ. ಮಂಜುನಾಥಾಚಾರ್, ರಾಜ್ಯ ಸಂಘಟನಾ ಆಯುಕ್ತರು(ಸ್ಕೌ). ಇವರು ದಿನಾಂಕ: 22-0-2015 ರಂದು ಶಿಬಿರಕ್ಕೆ ಭೇಟಿ ನೀಡಿ ಮಾರ್ಗದರ್ಶನ ನೀಡಿದರು.

**ರಾಜ್ಯಮಟ್ಟದ ಕರಕುಶಲ ಮತ್ತು ಗಾಯನ ತರಬೇತಿ ಶಿಬಿರ ಮತ್ತು ರಾಜ್ಯಮಟ್ಟದ ಜಿಲ್ಲಾ ತರಬೇತಿ ಆಯುಕ್ತರುಗಳ ಸಮಾವೇಶ**

ದಿನಾಂಕ: 10-9-2015 ರಿಂದ 14-09-2015 ವರೆಗೆ ರಾಜ್ಯಮಟ್ಟದ ಕರಕುಶಲ ಮತ್ತು ಗಾಯನ ತರಬೇತಿ ಶಿಬಿರವನ್ನು ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರದಲ್ಲಿ ಏರ್ಪಡಿಸಲಾಗಿತ್ತು.

ಈ ತರಬೇತಿ ಶಿಬಿರಕ್ಕೆ ಸ್ಕೌಟ್ ವಿಭಾಗದಿಂದ 24+3 ಶಿಬಿರಾರ್ಥಿಗಳು ಗೈಡ್ ವಿಭಾಗದಿಂದ 24+4 ಶಿಬಿರಾರ್ಥಿಗಳು ಭಾಗವಹಿಸಿದ್ದರು. ಗಾಯನ ಶಿಬಿರದ ನಾಯಕರಾಗಿ ಶ್ರೀ ಎಮ್.ಎಮ್.ಲೊಂಡೆ. ಎಲ್.ಟಿ.(ಎಸ್) ಹಾಗೂ ಶ್ರೀಮತಿ ಜಯಶ್ರೀ ನಾಯಕತ್ವ ವಹಿಸಿದ್ದರು. ಕರಕುಶಲ ತರಬೇತಿ ಶಿಬಿರಕ್ಕೆ ಶ್ರೀ.ಬಿ.ಕೆ.ಪಾಟೀಲ್ ಎಲ್.ಟಿ(ಎಸ್) ಹಾಗೂ ಶ್ರೀಮತಿ ಸಮುದ್ರಿಯವರು ನಾಯಕತ್ವ ವಹಿಸಿದ್ದರು.

ಗಾಯನ ತರಬೇತಿ ಶಿಬಿರದಲ್ಲಿ ದೇಶಭಕ್ತಿಗೀತೆಗಳು ಸರ್ವಧರ್ಮ ಪ್ರಾರ್ಥನೆಯ ಗೀತೆಗಳು ವಿವಿದ ಜಾನಪದಗೀತೆಗಳು ಪ್ರಾರ್ಥನೆಗೀತೆ, ಧ್ವಜಗೀತೆ ಮತ್ತು ರಾಷ್ಟಗೀತೆಯನ್ನು ಹಾಡುವುದರ ಮೂಲಕ ಸ್ಕೌಟ್-ಗೈಡ್‌ಗಳಿಗೆ ಉತ್ತಮ ರೀತಿಯಲ್ಲಿ ಕಲಿಸುವ ಕುರಿತು ಮಾಹಿತಿ ನೀಡಲಾಯಿತು.

* ದಿನಾಂಕ 12.9.15 ರಿಂದ 14.9.15 ರವರೆಗೆ ಜರುಗಿದ ಜಿಲ್ಲಾ ತರಬೇತಿ ಆಯುಕ್ತರುಗಳ ಸಮಾವೇಶಕ್ಕೆ ಸ್ಕೌಟ್ ವಿಭಾಗದಿಂದ 18 ಗೈಡ್ ವಿಭಾಗದಿಂದ 15 ಮಂದಿ ಭಾಗವಹಿಸಿದ್ದರು. ರಾಜ್ಯ ತರಬೇತಿ ಆಯುಕ್ತರಾದ ಶ್ರೀ ಎಲ್.ಟಿ. ಲೋಕೇಶ್ ಹಾಗೂ ಕೆ.ವಿ. ಶ್ಯಾಮಲ ರವರು ಶಿಬಿರದ ನೇತೃತ್ವ ವಹಿಸಿದ್ದರು. ಶಿಬಿರದ ಸಂಪನ್ಮೂಲವ್ಯಕ್ತಿಗಳಾಗಿ ಶ್ರೀ.ಸಿ.ಎಸ್.ರೆಡ್ಡಿ ಎಲ್.ಟಿ (ಎಸ್) ರಾಜ್ಯ ಜಂಟಿ ಕಾರ್ಯದರ್ಶಿ, ಎಸ್.ಕೆ.ಪ್ರಭ ರಾಜ್ಯ ಜಂಟಿ ಕಾರ್ಯದರ್ಶಿ ಶ್ರೀ ಬಿ. ಆನಂದ ಅಡಿಗ ಎಲ್.ಟಿ (ಎಸ್) ಉಡುಪಿ ಶ್ರೀ ಪ್ರತಿಮ್‌ಕುಮಾರ ಆಗಮಿಸಿದ್ದರು.

ಸಮಾವೇಶದಲ್ಲಿ ದಳ ಸಭೆಗಳನ್ನು ನೆಡೆಸುವ ಕುರಿತು, ತರಬೇತಿ ಶಿಬಿರಗಳನ್ನು ನಡೆಸಿ. ಅದರ ಗುಣಮಟ್ಟವನ್ನು ಹೆಚ್ಚಿಸುವ ಕುರಿತು, ಜಿಲ್ಲಾ ತರಬೇತಿ ಆಯುಕ್ತರ ಜವಾಬ್ದಾರಿ ಕುರಿತು. ವಾರ್ಷಿಕ ಯೋಜನೆಗಳ ಕುರಿತು, ತರಬೇತಿ ಶಿಬಿರಗಳನ್ನು ಸಂಘಟಿಸಿದಾಗ ಬರುವ ಸಮಸ್ಯೆಗಳಿಗೆ ಪರಿಹಾರೋಪಾಯಗಳನ್ನು ಕುರಿತು, ಇತ್ತೀಚಿನ ಹೊಸ SOT/APRO ಮತ್ತು ನಿಯಮಗಳಲ್ಲಿ ಆದ ಬದಲಾವಣೆಗಳ ಕುರಿತು ವಿವರವಾಗಿ ಚರ್ಚಿಸಲಾಯಿತು.

ದಿನಾಂಕ 12-09-2015 ರಂದು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರು ಶಿಬರಕ್ಕೆ ಭೇಟಿ ನೀಡಿ ಶಿಬಿರಾರ್ಥಿಗಳನ್ನು ಉದ್ದೇಶಿಸಿ ಮಾತನಾಡಿದರು.

ದಿನಾಂಕ 14-09-15 ರಂದು ತರಬೇತಿ ಶಿಬಿರದಲ್ಲಿ ಸರ್ವ ಧರ್ವ ಸಮನ್ವಯ ಪ್ರಾರ್ಥನೆ ಏರ್ಪಡಿಸಲಾಗಿತ್ತು.

# ನ್ಯಾಯಮೂರ್ತಿ ಶಂಕರನಾರಾಯಣರಾವ್ ಸ್ಮರಣಾರ್ಥ ಕರ್ನಾಟಕ ರಾಜ್ಯ ಮಟ್ಟದ ಮುಕ್ತದಳಗಳ ಸ್ಕೌಟ್ಸ್ ಮತ್ತು ಗೈಡ್ಸ್ ಮೇಳ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆ ಮತ್ತು ಶಿವಮೊಗ್ಗ ಜಿಲ್ಲಾ ಸಂಸ್ಥೆಯ ಸಂಯುಕ್ತಾಶ್ರಯದಲ್ಲಿ ದಿನಾಂಕ 13.10.2015 ರಿಂದ 17.10.2015 ರವರಗೆ ಶ್ರೀ ಆದಿಚುಂಚನಗಿರಿ ಶಾಲೆ ಶರಾವತಿ ನಗರ, ಶಿವಮೊಗ್ಗ +ಜಿಲ್ಲಾಡಳಿತ, ಜಿಲ್ಲಾ ಪಂಚಯತ್, ಮಹಾನಗರ ಪಾಲಿಕೆ, ಸಾರ್ವಜನಿಕ ಶಿಕ್ಷಣ ಇಲಾಖೆ, ಜಿಲ್ಲೆಯ ವಿವಿಧ ಇಲಾಖೆಗಳು ಹಾಗೂ ಶ್ರೀ ಆದಿಚುಂಚನಗಿರಿ ಶಿಕ್ಷಣ ಸಂಸ್ಥೆ(ರಿ), ಶಿವಮೊಗ್ಗ ಇವರ ಸಹಯೋಗದಲ್ಲಿ ನ್ಯಾಯಮೂರ್ತಿ ಶಂಕರನಾರಾಯಣರಾವ್ ಸ್ಮರಣಾರ್ಥಾ ಕರ್ನಾಟಕ ರಾಜ್ಯ ಮಟ್ಟದ ಮುಕ್ತದಳಗಳ ಸ್ಕೌಟ್ಸ್ ಮತ್ತು ಗೈಡ್ಸ್ ಮೇಳವನ್ನು ಏರ್ಪಡಿಸಲಾಗಿತ್ತು. ರಾಜ್ಯದ 19 ಜಿಲ್ಲೆಗಳಿಂದ 245 ಸ್ಕೌಟ್ಸ್, 20 ಸ್ಕೌಟ್ಸ್ ಮಾಸ್ಟರ್, 20 ಸೇವಾ ರೋವರ್ಸ್ ಹಾಗೂ 10 ಸಿಬ್ಬಂಧಿಗಳು, 219 ಗೈಡ್ಸ್, 13 ಗೈಡರ್ಸ್, 18 ಸೇವಾ ರೇಂಜರ್ಸ್ ಹಾಗೂ 11 ಸಿಬ್ಬಂಧಿಗಳು ಸೇರಿ ಒಟ್ಟೂ 556 ಶಿಬಿರಾರ್ಥಿಗಳು ಮೇಳದಲ್ಲಿ ಭಾಗವಹಿಸಿದ್ದರು. ಶ್ರೀ ಎ.ವಿ.ರಾಜೇಶ, ಪ್ರೀ.ಎ.ಎಲ್.ಟಿ(ರೋ) ಹಾಗೂ ಶ್ರೀಮತಿ ಶಶಿಕಲಾ ಎಎಲ್‌ಟಿ(ಗೈ) ಕ್ರಮವಾಗಿ ಸ್ಕೌಟ್ಸ್ ಮತ್ತು ಗೈಡ್ಸ್ ವಿಭಾಗಗಳ ನಾಯಕತ್ವ ವಹಿಸಿದ್ದರು.

ದಿನಾಂಕ 13.10.2015 ಸಂಜೆ ರ್‍ಯಾಲಿ ಉದ್ಘಾಟನೆಯನ್ನು ಮಾನ್ಯ ರಾಜ್ಯಸಭಾ ಸದಸ್ಯರಾದ ಶ್ರೀ ಆಯನೂರು ಮಂಜುನಾಥರವರು ನೆರವೇರಿಸಿದರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ, ರ್‍ಯಾಲಿ ಜ್ಯೋತಿಯನ್ನು ಬೆಳಗಿಸಿದರು. ಶ್ರೀ ಎಚ್.ಡಿ. ರಮೇಶ್ ಶಾಸ್ತ್ರಿ, ಜಿಲ್ಲಾ ಮುಖ್ಯ ಆಯುಕ್ತರು ಶಿವಮೊಗ್ಗ, ಶ್ರೀಮತಿ ಸರಸ್ವತಿ ನಾಗರಾಜ್ ಸಹಯಾಕ ಜಿಲ್ಲಾ ಆಯುಕ್ತರು ಮತ್ತು ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು. ಶ್ರೀ ಕೆ. ನರಸಿಂಹಮೂರ್ತಿ, ರಾಜ್ಯ ಕೇಂದ್ರ ಸ್ಥಾನಿಕ ಆಯುಕ್ತರು (ಮುಕ್ತದಳ) ಹಾಗೂ ಶ್ರೀ.ಕೆ. ಶಂಕರನಾರಾಯಣಾರಾವ್ ರವರ ಮೊಮ್ಮಗ ಶ್ರೀ. ಸುಭಾಷ್ ಹಾಗೂ ಮರಿ ಮಕ್ಕಳು ಈ ಸಮಾರಂಭದಲ್ಲಿ ಭಾಗವಹಿಸಿ 2 ಪರ್ಯಾಯ ಫಲಕಗಳನ್ನು ಶ್ರೀ.ಕೆ.ಶಂಕರನಾರಾಯಣಾರಾವ್ ರವರ ಹೆಸರಿನಲ್ಲಿ ಪ್ರತಿ ವರ್ಷ ಮುಕ್ತದಳಗಳಿಗೆ ನೀಡಲು ರಾಜ್ಯ ಮುಕ್ತ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರಿಗೆ ಹಸ್ತಾಂತರಿಸಿದರು.

ಆಕಾಶವಾಣಿ ಕಲಾವಿದರಾದ ಶ್ರೀ ಎಂ.ವೇಣುಗೋಪಾಲ್ ಮತ್ತು ವಾರ್ತಾ ಮತ್ತು ಪ್ರಸಾರ ಇಲಾಖೆಯ ಸಹಾಯಕ ನಿರ್ದೇಶಕರಾದ ಶ್ರೀ ಹೇಮಂತ್ ರಾಜ್ ಇವರು ಸಂಜೆ 6.30ಕ್ಕೆ ಸ್ಥಳೀಯ ಪ್ರತಿಭಾ ಪ್ರದರ್ಶನ ಉದ್ಘಾಟನೆಯನ್ನು ನೆರವೇರಿಸಿದರು. ಶಿವಮೊಗ್ಗ ಸ್ಥಳೀಯ ಕಲಾವಿದರಿಂದ ಕೊಳಲು ವಾದನ, ಮೂಕಾಭಿನಯ, ಗಾಯನ, ನೃತ್ಯ ಮತ್ತು ಕರಾಟೆ ಪ್ರದರ್ಶನಗಳು ನಡೆದವು. ಶ್ರೀಮತಿ ವಿಜಯಲಕ್ಷ್ಮಿ, ಜಿಲ್ಲಾ ಆಯುಕ್ತರು(ಗೈ) ಕಾರ್ಯಕ್ರಮವನ್ನು ನಿರ್ವಹಿಸಿದ್ದರು.

ದಿನಾಂಕ 15.10.2015 ರಂದು  ಬೆಳಿಗ್ಗೆ 9.00 ಗಂಟೆಗೆ ಸನ್ಮಾನ್ಯ ಶ್ರೀ ಪಾಟೀಲ್ ರವರು ರ್‍ಯಾಲಿ ಹೊರಸಂಚಾರಕ್ಕೆ ಚಾಲನೆ ನೀಡಿದರು. ಹೊರಸಂಚಾರದಲ್ಲಿ ಜಿಲ್ಲೆಯ ಸಕ್ರೆಬೈಲು ಆನೆಗಳ ಬಿಡಾರ, ಶ್ರೀ ಅರಕೆರೆ ರಾಮೇಶ್ವರ ದೇವಸ್ಥಾನ, ಶಿವಮೊಗ್ಗ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಭವನ, ಶಿವಪ್ಪ ನಾಯಕ ಅರಮನೆಗಳಿಗೆ ತೆರಳಲಾಯಿತು. ಸ್ಕೌಟಿಂಗ್ ವಿಷಯಗಳಾದ ಪ್ರಥಮ ಚಿಕಿತ್ಸೆ, ಪಟಾಲಂ ಕುರಿತು ಮಾರ್ಗದರ್ಶನ ನೀಡಲಾಯಿತು. ಜಿಲ್ಲಾ ಸ್ಕೌಟ್ ಭವನದ ಮೈದಾನದಲ್ಲಿ 12 ವಿವಿಧ ಸಾಹಸ ಚಟುವಟಿಕೆಗಳನ್ನು ಶಿವಮೊಗ್ಗ  ಮಹಾನಗರ ಪಾಲಿಕೆಯ ಉಪ ಮಹಾಪೌರರಾದ ಸನ್ಮಾನ್ಯ ಶ್ರೀ ಪಾಲಕ್ಷಿರವರು ಉದ್ಘಾಟಿಸಿದರು. ಮುಖ್ಯ ಆತಿಥಿಗಳಾಗಿ ಶ್ರೀ ವೈದ್ಯ, ಹಿರಿಯ ಪತ್ರಕರ್ತರು, ಸಂಚಾಲಕರು ಬೆಳ್ಳಿಮಂಡಲ ಶಿವಮೊಗ್ಗ, ಮತ್ತು ಶ್ರೀ ಪ್ರಸಾದ, ಕಿರುತೆರೆ ನಟ, ಇವರು ಉಪಸ್ಥಿತರಿದ್ದರು. ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ ಟಿ.ಎ. ಮಂಜುನಾಥಾಚಾರ್ ರವರನ್ನು ಇದೇ ಸಂದರ್ಭದಲ್ಲಿ ಸನ್ಮಾನಿಸಲಾಯಿತು.

ದಿನಾಂಕ 17.10.2015 ರಂದು ಸರ್ವಧರ್ಮ ಪ್ರಾರ್ಥನೆ, ದೇಶ ಭಕ್ತಿ ಗೀತೆ. ಭಾವೈಕ್ಯತೆ ಗೀತೆ ಏರ್ಪಡಿಸಲಾಗಿತ್ತು. ಶ್ರೀ ಟಿ.ಎ. ಮುಂಜುನಾಥಾಚಾರ್, ರಾಜ್ಯ ಸಂಘಟನಾ ಆಯುಕ್ತರು (ಸ್ಕೌ) ಶ್ರೀಮತಿ ಸಿ. ಮಂಜುಳಾ ರಾಜ್ಯ ಸಂಘಟನಾ ಆಯುಕ್ತರು(ಗೈ) ಇವರು ಮೇಳದ ಮಾರ್ಗದರ್ಶಕರಾಗಿದ್ದರು.

# ಜಿಲ್ಲಾ ವಾರ್ತೆಗಳು

## ಬೆಳಗಾವಿ

* ದಿನಾಂಕ 30-07-2015 ರಿಂದ 02-08-2015 ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಬೆಳಗಾವಿ ಇವರ ವತಿಯಿಂದ ರೋವರ್ ಮತ್ತು ರೇಂಜರ್‌ಗಳಿಗೆ ಜಿಲ್ಲಾ ಮಟ್ಟದ ನಿಪುಣ್ ಪರೀಕ್ಷಾ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು. ಶಿಬಿರದ ಉದ್ಘಾಟನೆಯಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಸ್.ವೈ. ಹುಡೇದ ಇವರು ಅಧ್ಯಕ್ಷತೆಯನ್ನು ವಹಿಸಿದ್ದರು. ಶ್ರೀ ಜಿ. ಅನ್ವೇಕರ, ಅಧ್ಯಕ್ಷರು, ಜ್ಞಾನದೀಪ ಶಿಕ್ಷಣ ಸಂಸ್ಥೆ ಬೆಳಗಾವಿ ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು ಹಾಗು ಜಿಲ್ಲಾ ಕೇಂದ್ರ ಸ್ಥಾನಿಕ ಆಯುಕ್ತರಾದ ಶ್ರೀ ಟಿ.ಡಿ. ಕಾಂಬೋಜಿ. ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್.ಎಂ. ನದಾಫ್ ರೋವರ್ ಸ್ಕೌಟ್ ಲೀಡರಾದ ಶ್ರೀ ಆರ್. ಎಚ್. ಗಡದನ್ನವರ, ಶ್ರೀಮತಿ ಆರ್.ಬಿ. ಗಡಕರಿ, ಡಾ॥ ಕೆ.ಬಿ. ದಳವಾಯಿ ಶ್ರೀ ಆರ್.ಆರ್. ಅಲಕುಂಟೆ ಜಿಲ್ಲಾ ಸಂಸ್ಥೆ ಎಲ್ಲ ಪದಾಧಿಕಾರಿಗಳು ಉಪಸ್ಥಿತರಿದ್ದರು. ಸದರಿ ಪರೀಕ್ಷಾ ಶಿಬಿರದಲ್ಲಿ ರೋವರ್ ವಿಭಾಗದ ನಾಯಕರಾಗಿ ಶ್ರೀ ಆರ್. ಎಚ್. ಗಡದನ್ನವರ, ರೇಂಜರ್ ವಿಭಾಗದಲ್ಲಿ ಶ್ರೀಮತಿ ಆರ್.ಬಿ. ಗಡಕರಿ, ಕಾರ್ಯನಿರ್ವಹಿಸಿದರು. ಶಿಬಿರದಲ್ಲಿ ಒಟ್ಟು 118 ರೋವರ್‌ಗಳು ಹಾಗು 51 ರೇಂಜರ್‌ಗಳು ವಿವಿಧ ಕಾಲೇಜುಗಳಿಂದ ಆಗಮಿಸಿದ್ದರು.

ದಿನಾಂಕ 31-07-2015 ರಂದು ಅರಣ್ಯ ಇಲಾಖೆಯ ಅಧಿಕಾರಿಗಳಾದ ಶ್ರೀ ತೆಲಗಿ ಹಾಗೂ ಶ್ರೀ ಶೇರಖಾನೆ ಇವರು ಭಾಗವಹಿಸಿದ ರೋವರ್ ಮತ್ತು ರೇಂಜರ್‌ಗಳಿಗೆ ಸಸಿಗಳನ್ನು ಹೇಗೆ ನೆಡಬೇಕು ಮತ್ತು ಅದರ ಪಾಲನೆ ಬಗ್ಗೆ ಸಂಪೂರ್ಣ ಮಾಹಿತಿಯನ್ನು ತಿಳಿಸಿಕೊಟ್ಟರು. ದಿನಾಂಕ 01-08-2015 ರಂದು ಜಿಲ್ಲಾ ಆಯುಕ್ತರು (ಸ್ಕೌಟ್) ಶ್ರೀ ಜೆ.ಬಿ. ಮನ್ನಿಕೇರಿ ಇವರು ಶಿಬಿರಕ್ಕೆ ಅಗಮಿಸಿ ರೋವರ್ ಮತ್ತು ರೇಂಜರ್‌ಗಳನ್ನು ಉದ್ದೇಶಿಸಿ ಮಾತನಾಡಿದರು. ದಿನಾಂಕ : 02-08-2015 ರಂದು ಬೆಳಗ್ಗೆ ಸರ್ವಧರ್ಮ ಪ್ರಾರ್ಥನೆಯನ್ನು ಆಯೋಜಿಸಲಾಗಿತ್ತು ಸಮಾರಂಭದಲ್ಲಿ ಶ್ರೀ ಎಂ.ಎಸ್. ತಿಗಡಿ, ಹಾಗೂ ಶ್ರೀ ಜಕಾತಿ. ಇವರುಗಳು ಉಪಸ್ಥಿತರಿದ್ದರು.

* ದಿನಾಂಕ 15-08-2015 ರಂದು 69ನೇ ಸ್ವಾತಂತ್ರ್ಯ ದಿನಾಚರಣೆ ನಿಮಿತ್ತ ಸ್ಕೌಟ್ ಭವನದಲ್ಲಿ ಧ್ವಜಾರೋಹಣ ಕಾರ್ಯಕ್ರಮವನ್ನು ಆಚರಿಸಲಾಯಿತು. ಧ್ವಜಾರೋಹಣವನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಸ್.ವೈ ಹುಡೇದ ಇವರು ನೆರವೇರಿಸಿದರು. ಕಾರ್ಯಕ್ರಮದಲ್ಲಿ ಜಿಲ್ಲಾ ಕಾರ್ಯದರ್ಶಿಗಳು ಹಾಗೂ ಜಿಲ್ಲೆಯ ಎಲ್ಲ ಪದಾಧಿಕಾರಿಗಳು ಉಪಸ್ಥಿತರಿದ್ದರು. ಜಿಲ್ಲಾ ಆಡಳಿತದಿಂದ ಆಯೋಜಿಸಿದ್ದ ಸಾಮೂಹಿಕ ಪಥಸಂಚಲನದಲ್ಲಿ ಸ್ಥಳೀಯ ವಿವಿಧ ಶಾಲೆಗಳಿಂದ 2 ಸ್ಕೌಟ್ ತಂಡಗಳು, 4 ಗೈಡ್ ತಂಡಗಳು ಭಾಗವಹಿಸಿದ್ದವು ಅವುಗಳಲ್ಲಿ ಪ್ರಥಮ ಸ್ಥಾನವನ್ನು ಸೆಂಟ್ ಜೋಸೆಫ್ ಶಾಲೆ ಗೈಡ್ ತಂಡ ಹಾಗು ದ್ವಿತೀಯ ಸ್ಥಾನವನ್ನು ವನಿತಾ ವಿದ್ಯಾಲಯ ಗೈಡ್ ತಂಡ ಪಡೆದುಕೊಂಡಿದ್ದಾರೆ.

* ದಿನಾಂಕ 25-8-2015 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಕಿತ್ತೂರಿನ ನೂತನ ಕಚೇರಿಯ ಉದ್ಘಾಟನಾ ಸಮಾರಂಭವನ್ನು ಹಮ್ಮಿಕೊಳ್ಳಲಾಗಿತ್ತು. ಸದರಿ ಕಾರ್ಯಕ್ರಮದ ಅಧ್ಯಕ್ಷತೆಯನ್ನು ದೈಹಿಕ ಶಿಕ್ಷಣಾಧಿಕಾರಿಗಳಾದ ಶ್ರೀ ಎಸ್.ವೈ. ಶಿಂಧೆ ಇವರು ವಹಿಸಿದ್ದರು ಹಾಗೂ ಸಮಾರಂಭದ ಮುಖ್ಯ ಅತಿಥಿಯಾಗಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಸ್.ವೈ ಹುಡೇದ ಹಾಗು ಕೇಂದ್ರ ಸ್ಥಾನಿಕ ಆಯುಕ್ತರಾದ ಶ್ರೀ ಟಿ.ಡಿ. ಕಾಂಬೋಜಿ ಭಾಗವಹಿಸಿದ್ದರು. ಸಮಾರಂಭದಲ್ಲಿ ಒಟ್ಟು 25 ಸ್ಕೌಟರ್ ಮತ್ತು ಗೈಡರ್‌ಗಳು ಭಾಗವಹಿಸಿದ್ದರು.

* ದಿನಾಂಕ 28-08-2015 ರಂದು ರಾಜ್ಯ ಸಂಸ್ಥೆ ಉಪಾಧ್ಯಕ್ಷರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಜಿಲ್ಲಾ ಸಂಸ್ಥೆಗೆ ಭೇಟಿ ನೀಡಿದ್ದರು. ಸಭೆಯಲ್ಲಿ ರಾಜ್ಯ ಪರಿಷತ್ ಸದಸ್ಯರು, ಜಿಲ್ಲಾ ಸ್ಕೌಟ್ ಆಯುಕ್ತರು, ವಿಭಾಗಿಯ ಸಹಾಯಕ ಆಯುಕ್ತರು, ರಾಜ್ಯ ಹಾಗೂ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಉಪಸ್ಥಿತರಿದ್ದರು. ಮಾನ್ಯ ಜಿಲ್ಲಾಧಿಕಾರಿಗಳನ್ನು ಭೇಟಿ ಮಾಡಿ ಜಿಲ್ಲಾ ಸಂಸ್ಥೆಯ ತರೇತಿ ಕೇಂದ್ರಕ್ಕೆ 25 ಎಕರೆ ಸರಕಾರಿ ಜಮೀನನ್ನು ಒದಗಿಸಿ ಕೊಡುವಂತೆ ಮನವಿಯನ್ನು ಸಲ್ಲಿಸಲಾಯಿತು. ನಂತರ ನಗರ ವಲಯದ ವಿವಿಧ ಶಾಲಾ ಕಾಲೇಜುಗಳಿಗೆ ಭೇಟಿ ನೀಡಿಸ್ಕೌಟ್ಸ್ ಮತ್ತು ಗೈಡ್ಸ್ ಘಟಕಗಳ ಸಂದರ್ಶನ ಮಾಡಿದರು.ಮಧ್ಯಾಹ್ನ ಜಿಲ್ಲಾ ಸ್ಕೌಟ್ ಭವನದಲ್ಲಿ ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳೊಂದಿಗೆ ಸಮಾಲೋಚನೆ ನಡೆಸಿದರು.

## ಬಾಗಲಕೋಟೆ

ದಿನಾಂಕ 15-08-2015 ರಂದು ಸ್ವಾತಂತ್ರೋತ್ಸವದ ಅಂಗವಾಗಿ ಧ್ವಜರೋಹಣವನ್ನು ಜಿಲ್ಲಾ ಕಛೇರಿಯಲ್ಲಿ ಉಪಾಧ್ಯಕ್ಷರಾದ ಮಾನ್ಯಶ್ರೀ ಜಿ.ಎನ್. ಪಾಟೀಲ ರವರು ನೆರವೇರಿಸಿದರು. ಜಿಲ್ಲಾ ಆಯುಕ್ತರಾದ ಶ್ರೀ ಬಿ.ಕೆ. ನಂದನೂರ ಹಾಗೂ ಪದಾಧಿಕಾರಿಗಳು ಹಾಜರಿದ್ದರು. ವಿವಿಧ ಶಾಲೆಯಿಂದ ಸ್ಕೌಟ್-ಗೈಡ್‌ಗಳು ಶಿಕ್ಷಕ-ಶಿಕ್ಷಕಿಯರು ಹಾಜರಿದ್ದರು. ಕಾರ್ಯದರ್ಶಿಗಳು ಶ್ರೀ ಸಿ.ಎ. ಸಾವಳಗಿ ಎಲ್ಲರಿಗೂ ಸ್ವಾಗತಿಸಿದರು. ಜಿಲ್ಲಾ ಕ್ರೀಡಾಂಗಣದಲ್ಲಿ ಜರುಗಿದ ಪಥಚಲನಸದಲ್ಲಿ ಶ್ರೀ ಬಸವೇಶ್ವರ ಪ್ರಾಥಮಿಕ ಶಾಲೆಯ ಗೈಡ್ಸ್ ತಂಡ ತೃತೀಯ ಸ್ಥಾನ ಪಡೆಯಿತು.

* ದಿನಾಂಕ 24-08-2015 ರಿಂದ 27-08-2015 ರ ವರೆಗೆ ಶ್ರೀ ರಾಮಾರೂಡಮಠ ನೆಮೀಕೇರಿ ತಾಲ್ಲೂಕು, ಜಿಲ್ಲಾ ಬಾಗಲಕೋಟ ಇಲ್ಲಿ ರೋವರ್ಸ್-ರೇಂಜರ್ಸ್‌ಗಳ ನಿಪುಣ ಪರೀಕ್ಷಾ ಶಿಬಿರ ಹಾಗು ಪದಕ ಪರೀಕ್ಷಾ ಶಿಬಿರವನ್ನು ಜರುಗಿಸಲಾಯಿತು. ಶಿಬಿರವನ್ನು ಮಠದ ಶ್ರೀಗಳಾದ ಪರಮರಾಮಾರೂಡ ಮಹಾಸ್ವಾಮಿಗಳು. ಉದ್ಘಾಟಿಸಿದರು. ಶಿಬಿರದ ಉದ್ಘಾಟನಾ ಕಾರ್ಯಕ್ರಮದಲ್ಲಿ ಜಿಲ್ಲಾ ಆಯುಕ್ತರಾದ ಶ್ರೀ ಬಿ.ಕೆ. ನಂದನೂರ, ಶ್ರೀ ಶಂಕರಗೌಡ ಸೋಮೇನಾಳ ಕೆ.ಎ.ಎಸ್., ಬಿ.ಐ.ಡಿ.ಎ., ಅಧಿಕಾರಿಗಳು, ಕಾಲೇಜಿನ ಎಲ್ಲ ಪ್ರಾಂಶುಪಾಲರು, ಅಧಿಕಾರಿಗಳು ಹಾಜರಿದ್ದರು. ಜಿಲ್ಲಾಕಾರ್ಯದರ್ಶಿಗಳು, ಶ್ರೀ ಸಿ.ಎ. ಸಾವಳಗಿ ಶಿಬಿರದ ಪ್ರಾಸ್ತಾವಿಕ ಮಾತುಗಳನ್ನು ನುಡಿದರು ಅಧ್ಯಕ್ಷತೆ ವಹಿಸಿದ ಶ್ರೀ ಬಿ.ಕೆ. ನಂದನೂರ ಜಿಲ್ಲಾ ಆಯುಕ್ತರು ಚಳವಳಿ ಇತಿಹಾಸವ ಕುರಿತು ರಾಜ್ಯ-ರಾಷ್ಟ್ರಮಟ್ಟದ ಶಿಬಿರಗಳು, ರಾಜ್ಯ ಹಾಗೂ ರಾಷ್ಟ್ರಪತಿ ಪುರಸ್ಕಾರವ ಕುರಿತು ತಿಳಿಹೇಳಿದರು. ಶ್ರೀಗಳು ಕೊನೆಯಲ್ಲಿ ಆಶೀರ್ವಚನ ನೀಡಿದರು.

ಶಿಬಿರದಲ್ಲಿ ನಿಪುಣ್ ಪರೀಕ್ಷಾ ಶಿಬಿರಕ್ಕೆ 65 ರೋವರ್ಸ್ , 32 ರೇಂಜರ್ಸ್ ಹಾಗು ಪದಕ ಪರೀಕ್ಷಾ ಶಿಬಿರಕ್ಕೆ 45 ರೋವರ್ಸ್, 19 ರೇಂಜರ್ಸ್ ಹಾಜರಿದ್ದರು. ಶಿಬಿರಕ್ಕೆ ನಾಯಕರುಗಳಾಗಿ ಶ್ರೀ ಎ.ವಿ.ರಾಜೇಶ್, ಶಿವಮೊಗ್ಗ, ಡಾ॥ ಎನ್.ಎಸ್. ನೀಲಗುಂದ ಕಾರ್ಯಕ್ರಮ ನಿರ್ವಹಿಸಿದರು.

## Bengaluru South

**Japan : 23rd World Scout Jamboree :** The Scouts and Scouters of Bangalore South District, Karnataka attended the 23rd World Scout Jamboree from 28th July, 2015 to 10th August 2015. The participants were 1) Kesavan Nanjappan, 2) Ebbin G. Shajji, 3) Prithvi Raj, 4) Suchetan M. 5) Lalit Sagar Rachala, 6) Lahari Siddhartha Rachala, 7) Nikitha Sharma, 8) Karunya Ballal, 9) Ayub Khan.

Sri M.K. Khan, Sri M.S. Satish, Sri T.K. Narayanaswamy, Sri A.S. Madhusudan, Sri Riyaz Pasha, Kum. Venugopala Gowda & Kum. Yamini Hariraj participated in the Jamboree as Staff Members & Leaders.

They were accompanied by Scouts-Guides of Mangaluru and Mysuru. There were total 13 Guides, and 12 Scouts. The entire troop departed from the Kempegowda International Airport, Bengaluru on 28th morning. They reached Fukuoka and were transported to Kirara Hama Jamboree site. The opening ceremony was held on 29th evening. It was a spectacular opening. 40,000 participants from 153 countries were assembled together as representatives of their coutries A few entertainment shows were organized by Japan. The governor of Yamaguchi prefecture gave a speech and then started the Flag Ceremony. Each country's flag was brought up to stage by a representative of their respective country. The organizers of the 22nd World Scout Jamboree held in Sweden in 2011, handed over the World Scout Flag to the organizers in Japan.The Japan Scout Flag was hoisted and the Jamboree was declared open. There was a special apperance by a Japanese Astronaut Mr. Soichi Noguchi who spoke apart Interplanetary Jamboree in the future where different planets would unite in one place for the Jamboree. There were various activities. They visited Hikari city where beach games were conducted and took a dip in the

ocean and then were taken to a Sports Training Centre where they learnt Japanese Art and Culture and were taught yoga. Then they had a nature module where they went on a hike to Mt. Fujio and got a glimpse of beauty of the nature through bird watching . There was a Cultural Day where everyone had to dress in their traditional dress and had a stage program displaying various cultural events which were displayed to show the essence of Japan. The prince of Japan, Mr. Naruhito visited and gave a speech on stage during Cultural Day. They were taken to Global Development village where various global issues were discussed with the scouts and the scouts were guided on how to help and play their role in solving these problems. They also had a science module where the scouts were given information about the upcoming technologies in the world. They were taken to the Hiroshima bombing place. The closing ceremony took place with a blast. The energy of the whole world was a spectacular scene to witness. There were amazing performances and guest appearance of Ahmed Alhendawi, the youth representative of the UN Secretary General. The Jamboree closed with a spectular performance by a band show. the overall experience was amazing and the Scouts-Guides learnt a lot and made new friends from all over the World.

## 16th Unit Leaders Conference at Shimla

* Bengaluru South District Association conducted the 16th Unit Leaders Conference at Baba Hardyal Singh Natural Retreat Center in Shillgaon, Shimla from 9th to 18th October 2015 There were 94 Participants and 9 Staff members in the Conference.

The conference was inaugurated by Mr. M K Khan, District Chief Commissioner and Mr. P. Palani, District Commissioner(S)was the Chief Guest. The sessions were held under the leadership of Mr. T K Narayanaswamy, District Training Commissioner(S) & Mrs. Gayathri Gowda, DTC.Topics like Challenges in running the Unit, Advancement of Unit Leader as per New SOT and Awards for Leaders, How to Prepare a Scout / Guide for various stages of their progressive trainings, Badge Work were dealt with during the Conference.Mrs. Kiran Thakur, JSS HP state BSG and Ms. Spriha Kanwar , ASOC HP State visited the conference and actively interacted with the participants.

All Faith Prayer was Conducted. The District Badge Committees were formed Mr. T Siddagangaiah and Mrs. Dakshayani were re -appointed as Badge Secretaries for Scout wing and Guide Wings respectively.The Medal of Merit and Bar to Medal of Merit were presented to the Awardees by the District Chief Commissioner MR. M K Khan.

Mrs Sarbjit Kaur, State Training Commissioner(G) Punjab State BSG was the Chief Guest for the Closing Ceremony. Mr. N Anand, District Treasurer and Mr. M V Janardhan, District Secretary, Kolar District were the Guests of Honour. The Members Visited the National Headquarters on 11th October 2015 and interacted with the Director of BSG Dr. K Sukumara ,Joint Director(S) Mr. Krishnaswamy R, Joint Director(SS) Ms. Surekha Srivatsava ,Deputy Director(BP) Mr. Amar Chettri.The participants went to Himachal Pradesh for sight seeing and visited Shimla Manikaran Manali & Rothang Pass.

## Gandhi Jayanthi Celebrations

* Bangalore South District Association celebrated Gandhi Jayanthi Programmes at 7 different places in the Local Associations on 2-10-2015. **Chamrajpet Local Association :** 300 Scouts & Guides Participated in a Route March alongwith Mr. Palani District Commissioner (S). Sri. M.S. Sateesh District Secretary Mr. Rohit.L.A. Secretary. They visited Victoria Hospital, Minto

Hospital & Vani Vilas Hospital and distributed fruits to the Patients. The programme was ended with All Faith Prayer. The Principal of Bhavan Bangalore School and ADC of Chamrajpet Local Association Addressed the gathering.

**Vijayanagar local Association :** Scouts & Guides Participated in Swatch Bharat Programme held at DIET Bangalore Urban Rajarajeshwarinagar with the physical Education Co-ordinator Mr. Doddanna Gowda and a batch of Scouts & Guides Participated in cleaning Campaign in Vijayanagar Bus stand with the L.A Secretary Mr. Siddagangaiah.

**K.R. Puram Local Association :** Swatch Bharat was organised at Jubilee School & College Campus Vijanapura, along with the Local Association Secretary & Management Members 150 Scouts & Guides Participated.

**Whitefield Local Association :** D.C.C. Mr M.K.Khan lead the Programme of cleaning the Varthur tank and Surroundings alongwith 100 Scouts & Guides of Whitefield L.A.

**Wilson Garden Local Association :** 150 Scouts & Guides participated in the cleaning Programme around the premises of Fatima School Madiwala with Local Association Secretary Mr. Nagesh.

**Basavangudi Local Association :** Cleanliness Awareness Programme was conducted in R.V. girls High School . Scouts & Guides Participated along with Basavangudi L.A Secretary Mr. Shekar

**Anekal Local Association :** The Rovers & Rangers Participated in the cleaning programme Surrounding of BEO office Anekal along with L.A Secretary Anekal Mr. Narendra Kumar and Physical Education Co-ordinator.

Scouts-Guides, Scouters-Guiders participated in the Gandhi Jayanthi Programme at Shanthi Gruha Bharat Scouts & Guides state Head Quarters

## ಚಿಕ್ಕಮಗಳೂರು

ದಿನಾಂಕ: 22-09-2015 ರಂದು ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ ಜಿಲ್ಲೆಗೆ ಆಗಮಿಸಿ ಜಿಲ್ಲಾ ಸಂಸ್ಥೆಯ ಹಾಗೂ ಜಿಲ್ಲೆಯ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಯ ಪ್ರಗತಿ ಪರಿಶೀಲನೆಯನ್ನು ಜಿಲ್ಲಾಧಿಕಾರಿಗಳವರ ಸಭಾಂಗಣದಲ್ಲಿ ನಡೆಸಿದರು. ಶಿಸ್ತು, ಸಂಯಮ, ದೇಶಪ್ರೇಮವನ್ನು ಚಿಕ್ಕಮಕ್ಕಳಲ್ಲಿ ತುಂಬುವ ಕೆಲಸವನ್ನು ಸ್ಕೌಟ್ಸ್-ಗೈಡ್ಸ್ ಅಂತರರಾಷ್ಟ್ರೀಯ ಮಟ್ಟದಲ್ಲಿ ಮಾಡುತ್ತಿದ್ದು ಅದರಂತೆ ಜಿಲ್ಲೆಯಲ್ಲಿ ಸ್ಕೌಟ್ಸ್-ಗೈಡ್ಸ್ ಚಟುವಟಿಕೆಯಲ್ಲಿ ಮುಂದಿದ್ದು ಉತ್ತಮ ಪ್ರಗತಿಯತ್ತ ಸಾಗುತ್ತಿದ್ದು ಉತ್ತಮ ನಾಗರೀಕ ಸಮಾಜ ನಿರ್ಮಾಣದಲ್ಲಿ ಪ್ರಮುಖ ಪಾತ್ರ ವಹಿಸಿದೆಯೆಂದು ತಿಳಿಸಿದರು. ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಚಟುವಟಿಕೆಗಳಿಗೆ ಜಿಲ್ಲಾಡಳಿತ ವತಿಯಿಂದ ಸಂಪೂರ್ಣ ಸಹಕಾರ ನೀಡುವುದಾಗಿ ಅಪರ ಜಿಲ್ಲಾಧಿಕಾರಿ ಶ್ರೀಮತಿ ಎಂ.ಎಲ್. ವೈಶಾಲಿ ತಿಳಿಸಿದರು.

ಸಭೆಯ ಅಧ್ಯಕ್ಷತೆಯನ್ನು ಜಿಲ್ಲಾ ಸಂಸ್ಥೆಯ ಮುಖ್ಯ ಆಯುಕ್ತ ಶ್ರೀ ಎಂ.ಎನ್. ಷಡಾಕ್ಷರಿ ವಹಿಸಿದ್ದರು. ಸಭೆಯಲ್ಲಿ ಜಿಲ್ಲಾ ಸ್ಕೌಟ್ಸ್ ಆಯುಕ್ತ ಶ್ರೀ ಎ.ಎನ್. ಮಹೇಶ್, ಜಿಲ್ಲಾ ಕಾರ್ಯದರ್ಶಿ ಶ್ರೀ ಶಶಿಧರ್, ಡಿ.ಡಿ.ಪಿ.ಐ., ಶ್ರೀ ನಾಗೇಶ್, ಹಿರಿಯರಾದ ಶ್ರೀ ನೀಲಕಂಠಾಚಾರ್, ಶ್ರೀಮತಿ ಸಂಧ್ಯಾರಾಣಿ, ಶ್ರೀ ಕಿರಣ್ ಕುಮಾರ್, ಶ್ರೀಮತಿ ಅನಿತಾ ನಾಗೇಂದ್ರ, ಶ್ರೀಮತಿ ಭಾರತಿ, ಶ್ರೀ ನಂದಕುಮಾರ್, ಶ್ರೀ ಮೋಹನ್ ಸೇರಿದಂತೆ ಪದಾಧಿಕಾರಿಗಳು ಹಾಜರಿದ್ದರು.

## ಚಿತ್ರದುರ್ಗ

ದಿನಾಂಕ 02-10-2015 ರಂದು ಮಹಾತ್ಮಾ ಗಾಂಧೀಜಿಯವರ ಭಾವಚಿತ್ರಕ್ಕೆ ಪೂಜೆ ಸಲ್ಲಿಸುವುದರೊಂದಿಗೆ 146ನೇ ಜನ್ಮ ದಿನಾಚರಣೆಯನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಹಾಗು ಸ್ಥಳೀಯ ಸಂಸ್ಥೆ ಚಿತ್ರದುರ್ಗ ಇವರ ಸಹಯೋಗೊಂದಿಗೆ ಆಚರಿಸಲಾಯಿತು. ಇದರ ಪ್ರಯುಕ್ತ ನಗರದ ಬೇರೆ ಬೇರೆ ಶಾಲೆಗಳ ಸ್ಕೌಟ್ಸ್-ಗೈಡ್ಸ್‌ಗಳಿಂದ

ಸರ್ವಧರ್ಮ ಪ್ರಾರ್ಥನೆಯನ್ನು ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಭವನ ಚಿತ್ರದುರ್ಗ. ಇಲ್ಲಿ ಮಾಡಲಾಯಿತು. ಕಾರ್ಯಾಲಯದ ಆವರಣದಲ್ಲಿ ಸ್ವಚ್ಛತಾ ಕಾರ್ಯಕ್ರಮವನ್ನು ಮಾಡಲಾಯಿತು. ಈ ಸಂದರ್ಭದಲ್ಲಿ ಶ್ರೀ ವೈ.ಬಿ. ಮಹೇಂದ್ರನಾಥ ಜಿಲ್ಲಾ ಸಹ ಕಾರ್ಯದರ್ಶಿ, ಇವರು ಸ್ಕೌಟ್-ಗೈಡ್‌ಗಳನ್ನು ಉದ್ದೇಶಿಸಿ ಗಾಂಧೀಜಿಯವರ ತ್ಯಾಗಮಯ ಜೀವನದ ಬಗ್ಗೆ ಹಾಗೂ ದೇಶಕ್ಕೆ ಸ್ವಾತಂತ್ರ್ಯವನ್ನು ಸತ್ಯ, ಶಾಂತಿ, ಅಹಿಂಸೆಯಿಮದ ತಂದುಕೊಟ್ಟ ದಿಗ್ವಿಜಯದ ಮಹಾತ್ಕಾರ್ಯಗಳ ಕುರಿತು ಹಿತವಚನ ಹೇಳಿದರು. ಶ್ರೀ ಪಿ.ವೈ. ದೇವರಾಜ್ ಪ್ರಸಾದ್, ಜಿಲ್ಲಾ ಸ್ಥಾನಿಕ ಆಯುಕ್ತರು (ಸ್ಕೌಟ್ಸ್) ಇವರು ಗಾಂಧೀಜಿಯವರ ಬಾಲ್ಯಜೀವನದ ಸತ್ಯ ಘಟನೆಗಳ ದೃಷ್ಟಾಂತಗಳನ್ನು ಸ್ಕೌಟ್-ಗೈಡ್‌ಗಳಿಗೆ ತಿಳಿಹೇಳಿದರು. ಶ್ರೀ ಅನ್ವರ್ ಪಾಷ ಜಿಲ್ಲಾ ಖಜಾಂಚಿ, ಶ್ರೀಮತಿ ಅನಿಲಾ, ಜಿಲ್ಲಾ ಸ್ಥಾನಿಕ ಆಯುಕ್ತರು (ಗೈಡ್ಸ್), ಶ್ರೀಮತಿ ಸಿ.ಪಿ. ಸುಶೀಲಾ ಜಿಲ್ಲಾ ತರಬೇತಿ ಆಯುಕ್ತರು (ಗೈಡ್ಸ್) ಉಪಸ್ಥಿತರಿದ್ದರು.

## ದಕ್ಷಿಣ ಕನ್ನಡ

**ಸ್ಕೌಟಿಂಗ್-ಗೈಡಿಂಗ್ ಚಳವಳಿಯ ಬಗ್ಗೆ ಮಾಹಿತಿ ಕಾರ್ಯಾಗಾರ :** ಜಿಲ್ಲೆಯ ಎಲ್ಲಾ ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ, ಸಮೂಹ ಸಂಪನ್ಮೂಲ ಸಮನ್ವಯ ಅಧಿಕಾರಿಗಳಿಗೆ, ತಾಲೂಕು ದೈಹಿಕ ಶಿಕ್ಷಣಾಧಿಕಾರಿಗಳಿಗೆ, ಶಿಕ್ಷಣ ಸಂಯೋಜಕರುಗಳಿಗೆ, ವಿಷಯ ಪರಿವೀಕ್ಷಣಾಧಿಕಾರಿಗಳಿಗೆ, ಸ್ಥಳೀಯ ಸಂಸ್ಥೆಯ ಅಧ್ಯಕ್ಷರುಗಳಿಗೆ ಮತ್ತು ಕಾರ್ಯದರ್ಶಿಗಳಿಗೆ ಸ್ಕೌಟಿಂಗ್-ಗೈಡಿಂಗ್ ಬಗ್ಗೆ ಮಾಹಿತಿ ಕಾರ್ಯಕ್ರಮವನ್ನು ದಿನಾಂಕ 17-08-2015 ರಂದು ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಭವನ, ನೆಹರೂ ಅವೆನ್ಯೂ ರಸ್ತೆ, ಲಾಲ್‌ಬಾಗ್, ಮಂಗಳುರು ಇಲ್ಲಿ ಸಂಘಟಿಸಲಾಯಿತು.

ಈ ಮಾಹಿತಿ ಕಾರ್ಯಾಗಾರವನ್ನು ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯರವರು ಉದ್ಘಾಟಿಸಿ ರಾಜ್ಯದಲ್ಲಿರುವ ಸ್ಕೌಟ್ಸ್ ತರಬೇತಿ ಕೇಂದ್ರಗಳನ್ನು ಮಾಹಿತಿ ತಂತ್ರಜ್ಞಾನ ಸಚಿವಾಲಯದ ಸಹಕಾರದೊಂದಿಗೆ ಉನ್ನತೀಕರಿಸಿ, ಪರಿಸರ ವಿಜ್ಞಾನ ಕೇಂದ್ರಗಳನ್ನಾಗಿ ಮಾಡಲಾಗುವುದು ಎಂದು ತಿಳಿಸಿದರು. ಪರಿಸರ ಮತ್ತು ವಿಜ್ಞಾನದ ಬಗ್ಗೆ ವಿದ್ಯಾರ್ಥಿಗಳಲ್ಲಿ ಜಾಗೃತಿ ಮೂಡಿಸುವ ನಿಟ್ಟಿನಲ್ಲಿ ರಾಜ್ಯದಲ್ಲಿ ಈಗಾಗಲೇ ಇರುವ ಸ್ಕೌಟ್ಸ್ – ಗೈಡ್ಸ್‌ನ 10 ತರಬೇತಿ ಕೇಂದ್ರಗಳನ್ನು ಮೇಲ್ದರ್ಜೆಗೇರಿಸಲಾಗುವುದು. ಈ ಬಗ್ಗೆ ಈಗಾಗಲೇ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವ ಶ್ರೀ ಎಸ್.ಆರ್. ಪಾಟೀಲ್ ಜತೆ ಮಾತುಕತೆ ನಡೆಸಿದ್ದೇವೆ. ಮಂಗಳೂರಿನಲ್ಲಿಯೂ ಈ ಕೇಂದ್ರವನ್ನು ಮಾಡಲಾಗುವುದು ಎಂದು ಅವರು ಹೇಳಿದರು.

ರಾಷ್ಟ್ರಪತಿ ಪುರಸ್ಕಾರ ಪರೀಕ್ಷಾ ಕೇಂದ್ರವನ್ನು ಮಂಗಳೂರಿನಲ್ಲಿ ಆರಂಭಿಸಲು ಉದ್ದೇಶಿಸಲಾಗಿದೆ. ಇಲ್ಲಿಯೇ ಪರೀಕ್ಷಾ ಕೇಂದ್ರ ಮಾಡಿದರೆ ಇನ್ನಷ್ಟು ಸ್ಕೌಟ್-ಗೈಡ್‌ಗಳಿಗೆ ಅನುಕೂಲವಾಗಲಿದೆ ಎಂದರು. ಮೊರಾರ್ಜಿ ವಸತಿ ಶಾಲೆ ಹಾಗೂ ಅಟಲ್ ಶಾಲೆಗಳ ವಿದ್ಯಾರ್ಥಿಗಳಿಗೆ ಕಡ್ಡಾಯವಾಗಿ ಸ್ಕೌಟ್ಸ್ ಮತ್ತು ಗೈಡ್ಸ್ ಸೇರುವ ಸೂಚನೆಯನ್ನು ಸರಕಾರನೀಡಲಿದೆ ಎಂದು ಅವರು ತಿಳಿಸಿದರು.

ಶಾಸಕ ಶ್ರೀ ಜೆ.ಆರ್. ಲೋಬೋ ಮಾತನಾಡಿ, ಈ ಬಾರಿ ರಾಷ್ಟ್ರಮಟ್ಟದ ಸ್ಕೌಟ್ಸ್ ಜಾಂಬೂರಿಯನ್ನು ಮಂಗಳೂರಿನಲ್ಲಿ ನಡೆಸುವುದಾದರೆ, ಸಂಪೂರ್ಣ ಸಹಕಾರ ನೀಡಲಾಗುವುದು, ಸಾಕಷ್ಟು ಶಿಕ್ಷಣ ಸಂಸ್ಥೆಗಳು ಇಲ್ಲಿದ್ದು, ಇನ್ನಷ್ಟು ಮಕ್ಕಳನ್ನು ಸ್ಕೌಟ್ಸ್‌ನಲ್ಲಿ ತೊಡಗಿಸಿಕೊಳ್ಳುವಂತೆ ತಿಳಿಹೇಳಬೇಕೆಂದರು.

ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಅಧ್ಯಕ್ಷರು ಮತ್ತು ಜಿಲ್ಲಾಧಿಕಾರಿಗಳು ಆದ ಶ್ರೀ ಇ.ಬಿ. ಇಬ್ರಾಹಿಂ ಐ.ಎ.ಎಸ್. ಇವರು ಮಾತನಾಡಿ, ರಾಷ್ಟ್ರೀಯ ಮಟ್ಟದ ಸ್ಕೌಟ್ಸ್ ಜಾಂಬೂರಿ ಮಾಡುವುದಾದರೆ, ಇಲ್ಲಿನ ಬೀಚ್, ಪಿಲಿಕುಳ ಅಥವಾ ಮೂಡಬಿದಿರೆಯಲ್ಲಿ ಆಯೋಜಿಸಲು ಬೇಕಾದ ಎಲ್ಲ ವ್ಯವಸ್ಥೆಯನ್ನು ಮಾಡುತ್ತೇವೆ ಎಂದರು.

ಜಿಲ್ಲಾ ಆಯುಕ್ತ ಶ್ರೀ ಎನ್.ಜಿ. ಮೋಹನ್ ಪ್ರಾಸ್ತಾವಿಕವಾಗಿ ಮಾತನಾಡಿ, ರಾಜ್ಯದಲ್ಲಿ 3.50 ಲಕ್ಷ ಮಂದಿ ಸ್ಕೌಟ್ಸ್ ವಿದ್ಯಾರ್ಥಿಗಳಿದ್ದು, ಈ ಸಂಖ್ಯೆಯನ್ನು 10 ಲಕ್ಷಕ್ಕೇರಿಸುವ ಗುರಿ ಇದೆ. ಜಿಲ್ಲೆಯಲ್ಲಿ ಒಂದು ಲಕ್ಷ ವಿದ್ಯಾರ್ಥಿಗಳ್ನು ಇದಕ್ಕೆ ಸೇರಿಸುವ ಗುರಿ ಇದೆ. 2012-13 ರಲ್ಲಿ ರಾಜ್ಯದಲ್ಲಿ 217 ಮಂದಿ ರಾಷ್ಟ್ರಪತಿ ಪುರಸ್ಕಾರ ಪಡೆದಿದ್ದು, ಅದರಲ್ಲಿ 74 ಮಂದಿ ದಕ್ಷಿಣ ಕನ್ನಡ ಜಿಲ್ಲೆಯವರಾಗಿದ್ದಾರೆ ಎಂದರು. ರಾಜ್ಯ ಜಂಟಿ ಕಾರ್ಯದರ್ಶಿ ಶ್ರೀಮತಿ ಎಸ್.ಕೆ. ಪ್ರಭಾ, ಡಯಟ್ ಪ್ರಿನ್ಸಿಪಾಲ್ ಸಿಪ್ರಿಯನ್ ಮೊಂತೇರೊ, ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕ ಶ್ರೀ ವಾಲ್ಟರ್ ಡಿ' ಮೆಲ್ಲೊ, ಜಿಲ್ಲಾ ಖಜಾಂಚಿ ಶ್ರೀ ವಾಸುದೇವ ಬೋಳೂರ್ ಉಪಸ್ಥಿತರಿದ್ದರು.

## ರಾಜ್ಯ ಪುರಸ್ಕಾರ ಸ್ಕೌಟ್ಸ್-ಗೈಡ್ಸ್, ಚತುರ್ಥಚರಣ ಕಬ್ಸ್, ಹೀರಖ್ ಪಂಖ್-ಬುಲ್‌ಬುಲ್ಸ್ ಪ್ರಶಸ್ತಿ ಪ್ರದಾನ ಸಮಾರಂಭ

ದಿನಾಂಕ 29-08-2015 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆಯ ವತಿಯಿಂದ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಭವನ, ಮಂಗಳೂರು ಇಲ್ಲಿ ರಾಜ್ಯಪುರಸ್ಕಾರ ಸ್ಕೌಟ್ಸ್-ಗೈಡ್ಸ್, ಚತುರ್ಥ ಚರಣ ಕಬ್ಸ್, ಹೀರಖ್ ಪಂಖ್ ಬುಲ್‌ಬುಲ್ಸ್ ಪ್ರಶಸ್ತಿ ಪ್ರದಾನ ಸಮಾರಂಭ ಸಂಘಟಿಸಲಾಯಿತು.

ಶ್ರೀ ಕುಮಾರ್ ಕೆ.ಎ.ಎಸ್. ಅಪರ ಜಿಲ್ಲಾಧಿಕಾರಿಗಳು ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಪ್ರಶಸ್ತಿ ಪತ್ರಗಳನ್ನು ವಿತರಿಸಿದರು. ಶಿಸ್ತು, ಸಂಘಟನೆ, ಶಾಂತಿಯ ಜೊತೆಗೆ ಸೇವೆಯನ್ನು ಮಾಡುತ್ತಿರುವ ಈ ಸಂಸ್ಥೆ ದಕ್ಷಿಣ ಕನ್ನಡ ಜಿಲ್ಲೆ ಮಾತ್ರವಲ್ಲದೆ ರಾಷ್ಟ್ರಮಟ್ಟದಲ್ಲಿ ಮಾದರಿಯಾಗಿ ಹೆಸರುವಾಗಿಯಾಗಲಿ ಎಂದು ಹಾರೈಸಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ರಾಮಶೇಷ ಶೆಟ್ಟಿಯವರು ಮಾತನಾಡಿ ಪ್ರತಿಯೊಬ್ಬ ವ್ಯಕ್ತಿಯು ತಮ್ಮ ಜೀವನದಲ್ಲಿ ಸ್ಕೌಟ್ ನಿಯಮ ಮತ್ತು ಪ್ರತಿಜ್ಞೆಯನಂತೆ ನಡೆಯುವ ಅಗತ್ಯವನ್ನು ತಿಳಿಸಿದರು. ಶ್ರೀ ಎನ್.ಜಿ. ಮೋಹನ್ ಜಿಲ್ಲಾ ಮುಖ್ಯ ಆಯುಕ್ತರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು.

### ರೋವರ್-ರೇಂಜರ್ ಪ್ಯಾಟ್ರೋಲ್ ಲೀಡರ್ಸ್ ತರಬೇತಿ ಶಿಬಿರ:-

ದಿನಾಂಕ 22-08-2015 ರಿಂದ 23-08-2015 ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆಯ ವತಿಯಿಂದ ಪಿಲಿಕುಳ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ತರಬೇತಿ ಕೇಂದ್ರದಲ್ಲಿ ಜಿಲ್ಲಾ ಮಟ್ಟದ ರೋವರ್-ರೇಂಜರ್ ಪ್ಯಾಟ್ರೋಲ್ ಲೀಡರ್ ತರಬೇತಿ ಶಿಬಿರವನ್ನು ಸಂಘಟಿಸಲಾಯಿತು.

ಶಿಬಿರದಲ್ಲಿ ವಿವಿದ ಕಾಲೇಜುಗಳ 100 ರೋವರ್-ರೇಂಜರ್ ಭಾಗವಹಿಸಿದ್ದರು. ಶ್ರೀ ಕೆ.ಎಸ್. ಈಶ್ವರಪ್ರಸಾದ್ ರೋವರ್ ವಿಭಾಗಕ್ಕೆ ಕು. ದಿವ್ಯಶ್ರೀ ರೇಂಜರ್ ವಿಭಾಗಕ್ಕೆ ನಾಯಕರಾಗಿ ಕಾರ್ಯನಿರ್ವಹಿಸಿದ್ದರು. ಶ್ರೀ ಪ್ರತೀಮ್ ಕುಮಾರ್ ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್) ಶಿಬಿರವನ್ನು ಸಂಘಟಿಸಿದ್ದರು. ಶಿಬಿರದಲ್ಲಿ ಸ್ಕೌಟಿಂಗ್ ಸಂಘಟನೆ, ಇತಿಹಾಸ, ದಳಸಭೆ, ನಾಯಕತ್ವ, ರಾಷ್ಟ್ರಧ್ವಜ, ಧ್ವಜವಂದನೆ ಹೊರಸಂಚಾರದ ಬಗ್ಗೆ ತಿಳಿಸಲಾಯಿತು.

**ರೋವರ್ - ರೇಂಜರ್ ಮಾಹಿತಿ ಕಾರ್ಯಗಾರ :** ದಿನಾಂಕ 04-09-2015 ರಂದು ಮಂಗಳೂರು ವಿಶ್ವವಿದ್ಯಾಲಯ ಕಾಲೇಜು ಅಭಿವೃದ್ಧಿ ಮಂಡಳಿ ವತಿಯಿಂದ ನಗರದ ವಿವಿ ಕಾಲೇಜಿನ ರವೀಂದ್ರ ಕಲಾಭವನದಲ್ಲಿ ಗುರುವಾರ ರೋವರ್-ರೇಂಜರ್ ಮಾಹಿತಿ ಕಾರ್ಯಗಾರ ನಡೆಯಿತು. ಮಂಗಳೂರು ವಿಶ್ವವಿದ್ಯಾನಿಲಯ ವ್ಯಾಪ್ತಿಯ ದಕ್ಷಿಣ ಕನ್ನಡ, ಉಡುಪಿ, ಕೊಡಗು ಜಿಲ್ಲಾ ವ್ಯಾಪ್ತಿಯ ವಿವಿಧ ಕಾಲೇಜುಗಳ 125 ಮಂದಿ ಉಪನ್ಯಸಕರು ತರಬೇತಿಯಲ್ಲಿ ಭಾಗವಹಿಸಿದ್ದರು. ಕಾರ್ಯಕ್ರಮ ಉದ್ಘಾಟಿಸಿದ ಆರೋಗ್ಯ ಸಚಿವ ಶ್ರೀ ಯು.ಟಿ. ಖಾದರ್, ಸ್ಕೌಟ್ಸ್‌ನಲ್ಲಿ ರೋವರ್ಸ್-ರೇಂಜರ್ಸ್ ಪಾತ್ರ ಮಹತ್ವವಾದುದು. ಸ್ಕೌಟ್ಸ್ ಪುನಶ್ಚೇತನ ಶಿಬಿರ ಜಿಲ್ಲಾ ಮಟ್ಟದಲ್ಲಿ ನಿರಂತರವಾಗಿ ನಡೆಯಬೇಕು. ಇದಕ್ಕೆ ಬೇಕಾದ ಎಲ್ಲ ಸಹಕಾರ ನೀಡಲಾಗುವುದು ಎಂದರು.

ಮಂಗಳೂರು ವಿವಿ ಕುಲಸಚಿವ ಪ್ರೊ.ಪಿಎಸ್. ಯಡಪಡಿತ್ತಾಯ ಅಧ್ಯಕ್ಷತೆ ವಹಿಸಿದ್ದರು. ಭಾರತ್ ಸ್ಕೌಟ್ಸ್-ಗೈಡ್ಸ್ ದ.ಕ. ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎನ್.ಜಿ. ಮೋಹನ್ ಅತಿಥಿಯಾಗಿದ್ದರು. ಮಂಗಳೂರು ವಿವಿ ಕಾಲೇಜು ಅಭಿವೃದ್ಧಿ ಮಂಡಳಿ ನಿರ್ದೇಶಕ ಪ್ರೊ. ಎಂ. ರಾಜಶೇಖರ್ ಸ್ವಾಗತಿಸಿ ಸ್ಕೌಟ್ಸ್ ಸಹಾಯಕ ರಾಜ್ಯ ಸಂಘಟನಾ ಆಯುಕ್ತ ಶ್ರೀ ಪ್ರಭಾಕರ ಭಟ್ ವಂದಿಸಿದರು. ನಿವೃತ್ತ ಪ್ರಾಂಶುಪಾಲ ಡಾ. ಮಾಧವ ಭಟ್ ಪ್ರಾಸ್ತಾವಿಕವಾಗಿ ಮಾತನಾಡಿದರು.

### ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ದಕ್ಷಿಣ ಕನ್ನಡ ಜಿಲ್ಲಾ ತರಬೇತಿ ಕೇಂದ್ರ ಪಿಲಿಕುಳದಲ್ಲಿ ಕರ್ನಾಟಕ ಬ್ಯಾಂಕ್ ಸಹಭಾಗಿತ್ವದಲ್ಲಿ ವನಮಹೋತ್ಸವ ಕಾರ್ಯಕ್ರಮ

ದಿನಾಂಕ 09-09-2015 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆ ವತಿಯಿಂದ ಕರ್ನಾಟಕ ಬ್ಯಾಂಕ್‌ನವರ ಸಹಭಾಗಿತ್ವದಲ್ಲಿ ಜಿಲ್ಲಾ ಸ್ಕೌಟ್-ಗೈಡ್ ತರಬೇತಿ ಕೇಂದ್ರ ಪಿಲಿಕುಳದಲ್ಲಿ ವನಮಹೋತ್ಸವ ಕಾರ್ಯಕ್ರಮವನ್ನು ಸಂಘಟಿಸಲಾಯಿತು. ಶ್ರೀ ಎಂ.ಎಸ್. ಮಹಾಬಲೇಶ್ವರ ಭಟ್, ಮುಖ್ಯ ಮಹಾಪ್ರಭಂದಕರು ಕರ್ನಾಟಕ ಬ್ಯಾಂಕ್ ಇವರು ಗಿಡ ನೆಡುವ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಗಿಡನೆಟ್ಟು ಬೆಳೆಸುವುದರಿಂದ ಉತ್ತಮ ಪರಿಸರ ನಿರ್ಮಾಣವಾಗುತ್ತದೆ. ಮನುಷ್ಯನ ಉಳಿವಿಗೆ ಅತ್ಯಮೂಲ್ಯವಾದ ಆಮ್ಲಜನಕವನ್ನು ಮರಗಳು ನೀಡುವುದಲ್ಲದೆ ಮಣ್ಣಿನ ಫಲವತ್ತತೆಯನ್ನು ಹೆಚ್ಚಿಸುತ್ತದೆ. ಪ್ರಾಣಿ ಪಕ್ಷಿಗಳಿಗೆ ಆಹಾರವನ್ನು, ಆಶ್ರಯವನ್ನು ಮರಗಳು

ನೀಡುತ್ತದೆ. ಎಲ್ಲಾ ಸ್ಕೌಟ್-ಗೈಡ್‌ಗಳು ಗಿಡಗಳನ್ನು ನೆಟ್ಟು ಬೆಳೆಸಬೇಕೆಂದು ತಿಳಿಸಿದರು. ಭಾರತ್ ಸ್ಕೌಟ್ಸ್ - ಗೈಡ್ಸ್‌ನ ಗಿಡ ನೆಟ್ಟು ಬೆಳೆಸುವ ಈ ಕಾರ್ಯಕ್ರಮಕ್ಕೆ ಕರ್ನಾಟಕ ಬ್ಯಾಂಕ್ 2.5 ಲಕ್ಷ ರೂಗಳನ್ನು ನೀಡುವ ಮೂಲಕ ಪ್ರಾಯೋಜಕತ್ವ ನೀಡಿದೆ. ಕರ್ನಾಟಕ ಬ್ಯಾಂಕ್ ವ್ಯವಹಾರದ ಜೊತೆಗೆ ಇಂತಹ ಅನೇಕ ಸಮಾಜಾಭಿವೃದ್ಧಿ ಕಾರ್ಯಗಳನ್ನು ಮಾಡುತ್ತಿದೆಯೆಂದು ಶ್ರೀ ಎಂ.ಎಸ್. ಮಹಾಬಲೇಶ್ವರ ಭಟ್ ತಿಳಿಸಿದರು.

ಹಂಪಿ ವಿಶ್ವವಿದ್ಯಾನಿಲಯ ವಿಶ್ರಾಂತ ಕುಲಪತಿಗಳೂ, ಜಾನಪದ ವಿದ್ವಾಂಸರೂ ಆದ ಪ್ರೊ. ವಿವೇಕ್ ರೈ, ಮುಖ್ಯ ಅತಿಥಿಗಳಾಗಿ ಮಾತನಾಡಿ ಮರಗಳನ್ನು ಬೆಳೆಸುವ ಅಗತ್ಯತೆಯನ್ನು ಸ್ಕೌಟ್-ಗೈಡ್‌ಗಳಿಗೆ ತಿಳಿಸಿದರು. ಶ್ರೀ ಶ್ರೀನಿವಾಸ ದೇಶಪಾಂಡೆ ಮುಖ್ಯ ಪ್ರಬಂಧಕರು ಕರ್ನಾಟಕ ಬ್ಯಾಂಕ್, ಶ್ರೀ ಪ್ರಭಾಕರ ಶರ್ಮ ಕಾರ್ಯನಿರ್ವಾಹಕ ನಿರ್ದೇಶಕರು ಪಿಲಿಕುಳ ನಿಸರ್ಗಧಾಮ, ಶ್ರೀ ಕೆ.ವಿ. ರಾವ್ ನಿರ್ದೇಶಕರು ಪಿಲಿಕುಳ ವಿಜ್ಞಾನ ಕೇಂದ್ರ, ಶ್ರೀ ವಾಸುದೇವ ಬೋಳೂರು ಜಿಲ್ಲಾ ಕೋಶಾಧಿಕಾರಿಗಳು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಇವರುಗಳು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀ ಎನ್.ಜಿ. ಮೋಹನ್, ಜಿಲ್ಲಾ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಅತಿಥಿಗಳನ್ನು ಸ್ವಾಗತಿಸಿ ಪ್ರಾಸ್ತಾವಿಕ ಮಾತುಗಳಲ್ಲಿ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ತರಬೇತಿ ಕೇಂದ್ರ ಪರಿಸರದಲ್ಲಿ ಕರ್ನಾಟಕ ಬ್ಯಾಂಕ್ ಹಾಗೂ ದಾನಿಗಳ ಸಹಕಾರದಲ್ಲಿ ಸುಮಾರು 200 ಗಿಡಗಳನ್ನು ನೆಟ್ಟು ಬೆಳೆಸಲಾಗುವುದು, ಕರ್ನಾಟಕ ರಾಜ್ಯದಲ್ಲಿ ಈ ವರ್ಷದಲ್ಲಿ ಸ್ಕೌಟ್ಸ್-ಗೈಡ್ಸ್ ವತಿಯಿಂದ ಸುಮಾರು ಒಂದು ಲಕ್ಷ ಗಿಡಗಳನ್ನು ನೆಟ್ಟು ಬೆಳೆಸುವ ಗುರಿ ಇದೆಯೆಂದು ತಿಳಿಸಿದರು.

## ದಾವಣಗೆರೆ

* ದಿನಾಂಕ 06-08-2015 ರಂದು ರೋಟರಿ ಬಾಲಭವನದಲ್ಲಿ ದಿ॥ ಕೊಂಡಜ್ಜಿ ಬಸಪ್ಪನವರ ಜನ್ಮಶತಮಾನೋತ್ಸವದ ಅಂಗವಾಗಿ ಜಿಲ್ಲಾ ಮಟ್ಟದ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಆಯೋಜಿಸಲಾಗಿತ್ತು. ಸದರಿ ಸಮಾವೇಶದಲ್ಲಿ ಸುಮಾರು 110ಕ್ಕೂ ಹೆಚ್ಚು ಸ್ಕೌಟರ್ಸ್-ಗೈಡರ್ಸ್‌ಗಳು ಭಾಗವಹಿಸಿದ್ದರು. ಮಾಜಿ ರಾಷ್ಟ್ರಪತಿ ಡಾ॥ ಎ.ಪಿ.ಜೆ. ಅಬ್ದುಲ್ ಕಲಾಂ ರವರ ನಿಧನಕ್ಕೆ 2 ನಿಮಿಷ ಮೌನಾಚರಣೆ ನಡೆಸಿದ ನಂತರ ಸಮಾವೇಶದ ಉದ್ಘಾಟನೆಯನ್ನು ಶ್ರೀಮತಿ ಹೆಚ್.ಎಂ. ಪ್ರೇಮಾ, ಉಪನಿರ್ದೇಶಕರು, ಸಾ.ಶಿ.ಇ. ದಾವಣಗೆರೆ ಇವರು ನೆರವೇರಿಸಿದರು. ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಚೆನ್ನಸ್ವಾಮಿ ರೆಡ್ಡಿ, ರಾಜ್ಯ ಜಂಟಿ ಕಾರ್ಯದರ್ಶಿಗಳು, ಬೆಂಗಳೂರು ಇವರು ಆಗಮಿಸಿ ಸ್ಕೌಟರ್ಸ್-ಗೈಡರ್ಸ್‌ಗಳಿಗೆ ಮಾಹಿತಿ ನೀಡಿದರು.

* ದಿನಾಂಕ 16-08-2015 ರಂದು ಸಮುದಾಯ ಅಭಿವೃದ್ಧಿ ಶಿಬಿರವನ್ನು ಜಿಲ್ಲಾ ಸಂಸ್ಥೆ ಮತ್ತು ನೇತಾಜಿ ಸ್ಕೌಟ್ ಗ್ರೂಪ್ ಹಾಗೂ ಚೇತನ ಗೈಡ್ ಗ್ರೂಪ್‌ನ ಸಂಯುಕ್ತಾಶ್ರಯದಲ್ಲಿ ದಿ॥ ಕೊಂಡಜ್ಜಿ ಬಸಪ್ಪನವರ ಜನ್ಮ ಶತಮಾನೋತ್ಸವದ ಅಂಗವಾಗಿ ಸರ್ಕಾರಿ ಪ್ರೌಢಶಾಲೆ, ಕಕ್ಕರಗೊಳ್ಳ, ದಾವಣಗೆರೆ ಇಲ್ಲಿ ನಡೆಸಲಾಯಿತು. ಇದರ ಉದ್ಘಾಟನೆಯನ್ನು ಶ್ರೀ ಜಯಪ್ರಕಾಶ, ಜೆ. ಚಿಗಟೇರಿ ಉಪಾಧ್ಯಕ್ಷರು ಭಾ.ಸ್ಕೌ.ಗೈ. ಜಿಲ್ಲಾ ಸಂಸ್ಥೆ ನೆರವೇರಿಸಿದರು. ಶ್ರೀ ಎ.ಪಿ. ಷಡಕ್ಷರಪ್ಪ ಜಿಲ್ಲಾ ಸ್ಕೌಟ್ ಆಯುಕ್ತರು ಹಾಗೂ ಶ್ರೀ ನೂರುಲ್ಲಾ ರಾಜ್ಯ ಸಹಾಯಕ ಸಂಘಟನಾ ಆಯುಕ್ತರು ಉಪಸ್ಥಿತರಿದ್ದರು. ಸುಮಾರು 250 ಕಬ್ಸ್, ಬುಲ್ ಬುಲ್ಸ್, ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ದಾವಣಗೆರೆಯಿಂದ ಕಕ್ಕರಗೊಳ್ಳಕ್ಕೆ ಸೈಕಲ್ ಜಾಥಾ ಮೂಲಕ ತೆರಳಿದ್ದರು. ಕಬ್ಸ್ ಬುಲ್ ಬುಲ್ಸ್‌ಗಳಿಗೆ ಸಿದ್ಧಗಂಗಾ ಪ್ರೌಢಶಾಲೆಯಿಂದ ಬಸ್ ವ್ಯವಸ್ಥೆ ಮಾಡಲಾಗಿತ್ತು. ಕಕ್ಕರಗೊಳ್ಳ ಊರಿನಲ್ಲಿ ಮೆರವಣಿಗೆ ಮಾಡಿ ಸ್ವಚ್ಛತೆ ಬಗ್ಗೆ ಅರಿವು ಮೂಡಿಸಿದರು.

* ಜಗಳೂರು ಸ್ಥಳೀಯ ಸಂಸ್ಥೆ ವತಿಯಿಂದ ದಿ॥ ಕೊಂಡಜ್ಜಿ ಬಸಪ್ಪನವರ ಶತಮಾನೋತ್ಸವದ ಅಂಗವಾಗಿ ಸಾಮಾನ್ಯ ಜನರಿಗಾಗಿ ಯೋಗದಿಂದ ರೋಗಮುಕ್ತ ಎಂಬ ಕಾರ್ಯಕ್ರಮವನ್ನು ಸ್ಕೌಟ್ ಮಾಸ್ಟರ್ ಆದ ಶ್ರೀ ಟಿ. ಆಂಜನೇಯ ಮತ್ತು ಶ್ರೀ ಡಿ. ಬಸವರಾಜ ಇವರು ಒಂದು ತಿಂಗಳವರೆಗೆ ನಡೆಸಿಕೊಟ್ಟರು.

## ಧಾರವಾಡ

ದಿನಾಂಕ 27-08-2015 ರಂದು ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರ ನೇತೃತ್ವದಲ್ಲಿ ರಾಜ್ಯ ತಂಡವು ಧಾರವಾಡ ಜಿಲ್ಲೆಗೆ ಸಂದರ್ಶನ ನೀಡಿತು. ಬೆಳಿಗ್ಗೆ 10 ಗಂಟೆಗೆ ಧಾರವಾಡ ತಾಲೂಕು ದಡ್ಡಿಕಮಲಾಪುರದಲ್ಲಿರುವ "ಸಸ್ಯ ಚೇತನ" ಜಿಲ್ಲಾ ತರಬೇತಿ ಕೇಂದ್ರದ ಅಭಿವೃದ್ಧಿಯನ್ನು ನೋಡಿ ಸಂತೋಷ ವ್ಯಕ್ತಪಡಿಸಿದರು. ಕೇಂದ್ರದ ವಿವಿಧ ವಿಭಾಗಗಳನ್ನು

ನೋಡಿ ಜಿಲ್ಲಾ ಪದಾಧಿಕಾರಿಗಳೊಡನೆ ಚರ್ಚಿಸಿ, ತಮ್ಮ ಮಾರ್ಗದರ್ಶನವನ್ನು ನೀಡಿದರು. **ಬೆಳಿಗ್ಗೆ 11 ಗಂಟೆಗೆ** ಸ್ಥಳೀಯ ಸಂಸ್ಥೆಯ ಕಾರ್ಯಾಲಯದ ಸಂದರ್ಶನಕ್ಕಾಗಿ ಧಾರವಾಡ ತಾಲೂಕ ಸಂಸ್ಥೆಗೆ ಸಂದರ್ಶನ ನೀಡಿದಾಗ ತಾಲೂಕ ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಸಹಾಯಕ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಎಸ್.ಸಿ. ಕರಿಕಟ್ಟಿಯವರು ತಂಡದವರನ್ನು ಬರಮಾಡಿಕೊಂಡರು. ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಹಾಗು ಸ್ಕೌಟರ್ಸ್-ಗೈಡರ್ಸ್ ಉಪಸ್ಥಿತರಿದ್ದು, ಎಲ್ಲ ವಿವರಗಳನ್ನು ನೀಡಿದರು. ಸಂದರ್ಶನ ತಂಡವು ಸಂಸ್ಥೆಯ ಸ್ವಚ್ಛತೆ ಹಾಗು ಪ್ರದರ್ಶನ ಫಲಕವನ್ನು ನೋಡಿ ತಮ್ಮ ಹರ್ಷ ವ್ಯಕ್ತಪಡಿಸಿದರು.

**ಮಧ್ಯಾಹ್ನ 12 ಗಂಟೆಗೆ** ಸ್ಕೌಟ್ಸ್-ಗೈಡ್ಸ್, ಕಬ್-ಬುಲ್‌ಬುಲ್ ದಳಗಳಿರುವ ಜನತಾ ಶಿಕ್ಷಣ ಸಮಿತಿಯ ಶೈಕ್ಷಣಿಕ ಸಂಸ್ಥೆಗಳಿಗೆ ಭೇಟಿ ನೀಡಿದ ತಂಡವು ಸ್ಕೌಟ್-ಗೈಡ್‌ಗಳ ಚಟುವಟಿಕೆಗಳನ್ನು ವಿವಿಧ ಪ್ರಕಾರದ ಕಾರ್ಯಕ್ರಮಗಳನ್ನು ನೊಡಿ ಸಂತಸವನ್ನು ವ್ಯಕ್ತಪಡಿಸಿ ಶಿಕ್ಷ ಸಂಸ್ಥೆಗಳ ಪ್ರಾಚಾರ್ಯರಿಗೆ ಸ್ಕೌಟರ್ಸ್ ಗೈಡರ್ಸ್‌ಗಳಿಗೆ ಹಾಗೂ ಆಡಳಿತ ಮಂಡಳಿಗೆ ತಮ್ಮ ಅಭಿನಂದನೆ ಸಲ್ಲಿಸಿದರು. **ಸಂಜೆ 4 ಗಂಟೆಗೆ** ಜಿಲ್ಲಾ ಸಂಸ್ಥೆಯ ಬಿ.ಪಿ. ಭವನದಲ್ಲಿ ನಡೆದ ಸ್ಕೌಟರ್ಸ್-ಗೈಡರ್ಸ್ ಹಾಗು ಪದಾಧಿಕಾರಿಗಳ ಸಮಾವೇಶದಲ್ಲಿ ವಿವಿಧ ವಿಷಯಗಳ ಮೇಲೆ ಮಾರ್ಗದರ್ಶನ ನೀಡಿದರು.

## ಹಾಸನ

ದಿನಾಂಕ 29-08-2015 ರಿಂದ 30-08-2015ರ ವರೆಗೆ ಹಾಸನದ ಭಾ.ಸ್ಕೌ-ಗೈ ಸಮುದಾಯ ಭವನದಲ್ಲಿ ಜಿಲ್ಲಾಮಟ್ಟದ ಸಿಕ್ಸರ್ಸ್ ತರಬೇತಿ ಮತ್ತು ಹೀರಕ್ ಪಂಖ್ ಪರೀಕ್ಷಾ ಶಿಬಿರ ನಡೆಯಿತು. ಜಿಲ್ಲೆಯ ವಿವಿಧ ಶಾಲೆಗಳಿಂದ ಒಟ್ಟು 46 ಬುಲ್ ಬುಲ್ಸ್ ಮತ್ತು 16 ಕಬ್ಸ್. ಕಬ್ ಮಾಸ್ಟರ್ ಹಾಗೂ ಫ್ಲಾಕ್ ಲೀಡರ್ಸ್‌ಗಳು ಪಾಲ್ಗೊಂಡಿದ್ದರು. ಶಿಬಿರದ ನಾಯಕರಾಗಿ ಶ್ರೀಮತಿ ಸೋಫಿಯ ಪರ್ನಾಂಡೀಸ್ ಕರ್ತವ್ಯ ನಿರ್ವಹಿಸಿದರು. ಜಂಟಿ ಕಾರ್ಯದರ್ಶಿ ಶ್ರೀಮತಿ ಹೆಚ್.ಜೆ ಕಾಂಚನಮಾಲ ಅವರು ಶಿಬಿರದ ಮಾರ್ಗದರ್ಶಕರಾಗಿ ಕಾರ್ಯನಿರ್ವಹಿಸಿದರು.

ನೋಂದಣಿ ಮತ್ತು ಧ್ವಜಾರೋಹಣದ ನಂತರ ಉದ್ಘಾಟನಾ ಸಮಾರಂಭ ಜರುಗಿತು. ಪೋಲಿಸ್ ಇಲಾಖೆಯವೃತ್ತ ನಿರೀಕ್ಷಕರಾದ ಶ್ರೀ ಶಿವಕುಮಾರ್ ಶಿಬಿರವನ್ನು ಉದ್ಘಾಟಿಸಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ಹಿತನುಡಿ ನುಡಿದರು. ಶ್ರೀ ಸುನಿಲ್ ಕುಮಾರ್ ಜೈನ್, ಶ್ರೀ ಆವೇಶ್ವರ ಜೈನ್ ಯುವಕ ಸಂಘದ ಅಧ್ಯಕ್ಷರು ಉಪಸ್ಥಿತರಿದ್ದರು. ಕಬ್ಸ್-ಬುಲ್‌ಬುಲ್ಸ್‌ಗಳಿಗೆ ಪ್ರವೇಶದಿಂದ ರಜತ್ ಪಂಖ್ ವರೆಗೆ ವಿವಿಧ ವಿಷಯಗಳನ್ನು ಬೋಧಿಸಲಾಯಿತು. ದಿನಾಂಕ 30 ರಂದು ಬೆಳಿಗ್ಗೆ ಸರ್ವಧರ್ಮ ಪ್ರಾರ್ಥನೆ ಹಾಗೂ ಬುಲ್-ಬುಲ್ಸ್‌ಗಳಿಗೆ ಹೀರಖ್ ಪಂಖ್ ಪರೀಕ್ಷೆ ನಡೆಸಲಾಯಿತು. ದಿನಾಂಕ 30-08-2015 ರ ಮಧ್ಯಾಹ್ನ 3 ಗಂಟೆಗೆ ಸಮಾರೋಪ ಸಮಾರಂಭ ಜರುಗಿತು. ಮುಖ್ಯ ಅತಿಥಿಗಳಾಗಿ ಲೋಕಾಯುಕ್ತ ವರಿಷ್ಠಾಧಿಕಾರಿಗಳಾದ ಶ್ರೀ ಡಾ. ವೇದಮೂರ್ತಿ ಯವರು ಆಗಮಿಸಿದ್ದರು. ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಪ್ರಕಾಶ್ ಎಸ್. ಯಾಜಿ ಅವರು ಅಧ್ಯಕ್ಷತೆ ವಹಿಸಿದ್ದರು. ಗೈಡ್ಸ್ ಆಯುಕ್ತರಾದ ಶ್ರೀಮತಿ ಜಯಾ ರಮೇಶ್ ಉಪಸ್ಥಿತರಿದ್ದರು. ಶ್ರೀಮತಿ ಸೋಫಿಯಾ ಫರ್ನಾಂಡೀಸ್ ಅವರು ವರದಿ ವಾಚಿಸಿದರು. ಜಿಲ್ಲಾ ಖಜಾಂಚಿಯವರಾದ ಶ್ರೀ ಸಿದ್ಧೇಶ್‌ಕುಮಾರ್ ಉಪಸ್ಥಿತರಿದ್ದರು. ಶ್ರೀಮತಿ ಲೋಕೇಶಮ್ಮ ಪರೀಕ್ಷಕರಾಗಿ ಕಾರ್ಯ ನಿರ್ವಹಿಸಿದರು. ಸಹಕಾರ್ಯದರ್ಶಿ ಶ್ರೀ ಆರ್.ಜಿ. ಗಿರೀಶ್ ಸ್ವಾಗತಿಸಿದರು. ಶ್ರೀಮತಿ ಹೆಚ್.ಜೆ. ಕಾಂಚನಮಾಲಾ ವಂದಿಸಿದರು. ಶ್ರೀಮತಿ ಲೋಕೇಶಮ್ಮ ಕಾರ್ಯಕ್ರಮ ನಿರೂಪಿಸಿದರು ಹಾಗೋ ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು.

## ಕಾರವಾರ

ಜಿಲ್ಲಾ ಮಟ್ಟದ ತೃತೀಯ ಸೋಪಾನ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಪರೀಕ್ಷಾ ಶಿಬಿರವನ್ನು ಜಿಲ್ಲಾ ಸಂಸ್ಥೆ ಕಾರವಾರ ಹಾಗೂ ಸ್ಥಳೀಯ ಸಂಸ್ಥೆ ಅಂಕೋಲಾರವರ ಸಂಯುಕ್ತಾಶ್ರಯದಲ್ಲಿ ಸರ್ಕಾರಿ ಹಿರಿಯ ಪ್ರಾ. ಶಾಲೆ ಬಾಸಗೊಡದಲ್ಲಿ ನಡೆಯಿತು. ಕಾರವಾರ ಜಿಲ್ಲೆಯ ಕಾರವಾರ, ಅಂಕೋಲಾ, ಕುಮಟಾ ಹಾಗೂ ಹೊನ್ನಾವರ ತಾಲ್ಲೂಕಿನ ಒಟ್ಟು 155 ಸ್ಕೌಟ್ ಗೈಡ್‌ಗಳು ಸ್ಕೌಟರ್ಸ್-ಗೈಡರ್ಸ್‌ಗಳು ಹಾಜರಿದ್ದರು. ಉದ್ಘಾಟನೆಯನ್ನು ಅದೇ ಶಾಲೆಯ ಮುಖ್ಯ ಶಿಕ್ಷಕರಾದ ಶ್ರೀ ಮಂಜುನಾಥ ಗಾಂವ್ಕರ ಬಗ್ಗಿರವರಿಂದ ನೆರವೇರಿಸಿದರು. ಜಿಲ್ಲಾ ಕಾರ್ಯದರ್ಶಿಯವರಾದ ಶ್ರೀ ಬಿ.ಡಿ. ಫರ್ನಾಂಡೀಸ್ ಜಂಟಿ ಕಾರ್ಯದರ್ಶಿ ಶ್ರೀಮತಿ ರತ್ನಾ ನಾಯ್ಕ ಉಪಸ್ಥಿತರಿದ್ದರು. ಈ ಒಂದು ಪರೀಕ್ಷಾ ಶಿಬಿರವು ಮೂರು ದಿನ ನಡೆಯಿತು. ಕೊನೆಯ ದಿನ ಸರ್ವಧರ್ಮ ಪ್ರಾರ್ಥನೆ ಹಮ್ಮಿಕೊಳ್ಳಲಾಗಿತ್ತು.

## ರಾಯಚೂರು

ಸ್ಕೌಟ್ಸ್-ಗೈಡ್ಸ್ ಚಳವಳಿ ಇದು ಪ್ರತಿಯೊಬ್ಬರಿಗೆ ತಮ್ಮ ವ್ಯಕ್ತಿತ್ವ ವಿಕಸನ ವೃದ್ಧಿಸುವುದರ ಜೊತೆಗೆ ಇದು ಜೀವನದ ಕೌಶಲ್ಯಕ್ಕೆ ಪೂರಕವಾಗಿದೆ ಎಂದು ಶ್ರೀ ರಂಗಣ್ಣ ಪಾಟೀಲ್ ಅಳ್ಳುಂಡಿ, ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ದೇವದುರ್ಗ ಇವರು ಅಭಿಪ್ರಾಯ ಪಟ್ಟರು. ದಿನಾಂಕ 28-08-2015 ರಂದು ದೇವದುರ್ಗ ಪಟ್ಟಣದ ಸರ್ಕಾರಿ ಬಾಲಕಿಯರ ಮಾದರಿಯ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಹಮ್ಮಿಕೊಂಡಿರುವ ದೇವದುರ್ಗ ತಾಲೂಕು ಮಟ್ಟದ ಸ್ಕೌಟರ್ಸ್-ಗೈಡರ್ಸ್ ಸಮಾವೇಶದ ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಮಾತನಾಡಿದರು. ಕಾರ್ಯಕ್ರಮದ ಮೊದಲು ದಿ॥ ಎ. ವೆಂಕಟೇಶ ನಾಯಕ, ಶಾಸಕರು ದೇವದುರ್ಗ ಇವರು ನಿಧನ ಹೊಂದಿರುವ ಪ್ರಯುಕ್ತ ಅವರ ಆತ್ಮಕ್ಕೆ ಶಾಂತಿಕೋರಿ ಒಂದು ನಿಮಿಷ ಮೌನ ಪ್ರಾರ್ಥನೆ ಮಾಡಲಾಯಿತು.

* ಸ್ಕೌಟ್ಸ್-ಗೈಡ್ಸ್ ಸಂಸ್ಥೆಯನ್ನು ಕರ್ನಾಟಕದಲ್ಲಿ ಹೆಚ್ಚು ಜನಪ್ರಿಯಗೊಳಿಸುವಲ್ಲಿ ಪ್ರಾಮಾಣಿಕವಾಗಿ ದೀರ್ಘವಾದ ಸೇವೆ ಸಲ್ಲಿಸಿ ನಮ್ಮ ನಾಡಿಗೆ ಕೀರ್ತಿ ತಂದಿರುವ ಕೊಂಡಜ್ಜಿ ಬಸಪ್ಪನವರ ಕೊಡುಗೆ ಅಪಾರವಾದದ್ದು ಎಂದು ಡಾ॥ ಶಿವಶರಣಪ್ಪ ಇಟ್ಲಿ, ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಲಿಂಗಸುಗೂರು ಇವರು ಅಭಿಪ್ರಾಯ ಪಟ್ಟರು.

ದಿನಾಂಕ 31-08-2015 ಲಿಂಗಸೂಗೂರು ಪಟ್ಟಣದ ಶಾಸಕರ ಸರ್ಕಾರಿ ಮಾದರಿಯ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ದಿ॥ ಕೊಂಡಜ್ಜಿ ಬಸಪ್ಪನವರ ಜನ್ಮ ಶತಮಾನೋತ್ಸವ ಸ್ಮರಣಾರ್ಥವಾಗಿ ಏರ್ಪಡಿಸಿದ ತಾಲೂಕು ಮಟ್ಟದ ಸ್ಕೌಟರ್ಸ್-ಗೈಡರ್ಸ್ ಸಮಾವೇಶ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಮಾತನಾಡಿದರು.

ಸಮಾವೇಶ ಉದ್ಘಾಟಿಸಿದ ಶ್ರೀಮತಿ ಸರೋಜಾ ಪೋಳ ಕ್ಷೇತ್ರ ಸಮನ್ವಯ ಅಧಿಕಾರಿಗಳು ಮಾತನಾಡಿ, ಸ್ಕೌಟ್ಸ್-ಗೈಡ್ಸ್‌ಗಳಲ್ಲಿ ಶಿಸ್ತು, ಸಹಕಾರ ಮನೋಭಾವನೆ, ಹಿರಿಯರಿಗೆ ಗೌರವಿಸುವ ಮನೋಭಾವ ಬೆಳೆಸಲು ಸ್ಕೌಟ್ಸ್-ಗೈಡ್ಸ್ ಸಹಕಾರಿಯಾಗಲಿದೆ ಎಂದರು. ಈ ಸಂದರ್ಭದಲ್ಲಿ ಶ್ರೀ ಶ್ರವಣಕುಮಾರ ತಾಲೂಕ ದೈಹಿಕ ಶಿಕ್ಷಣಾಧಿಕಾರಿಗಳು, ಶ್ರೀ ಸಾಬಣ್ಣ ವಗ್ಗರ, ಮುಖ್ಯ ಗುರುಗಳು ಸರ್ಕಾರಿ ಪ್ರೌಢಶಾಲೆ, ಸಂತೆಕಲ್ಲೂರು, ಮುಖ್ಯ ಅತಿಥಿಗಳಾಗಿ ಮಾತನಾಡಿದರು. ಶ್ರೀ ರಾವುತರಾವ್ ಬರೂರ ಜಿಲ್ಲಾ ಸಂಘಟನಾ ಆಯುಕ್ತರು ಇವರು ಪ್ರಾಸ್ತಾವಿಕವಾಗಿ ಮಾತನಾಡಿದರು. ಈ ಸಮಾರಂಭದಲ್ಲಿ ಡಾ॥ ಶಿವಶರಣಪ್ಪ ಇಟ್ಲಿ ಇವರಿಗೆ ಜಿಲ್ಲಾ ರಾಜ್ಯೋತ್ಸವ ಪ್ರಶಸ್ತಿ ಪಡೆದಿರುವ ಪ್ರಯುಕ್ತವಾಗಿ, ಶ್ರೀ ರಾವುತರಾವ್ ಬರೂರ ಉತ್ತಮ ಜಿಲ್ಲಾ ಸಂಘಟನಾ ಆಯುಕ್ತರ ಪ್ರಶಸ್ತಿ, ಶ್ರೀ ಶರಣಪ್ಪ ಟಿ. ಇವರಿಗೆ ರಾಜ್ಯ ಉತ್ತಮ ಸ್ಕೌಟ್ ಮಾಸ್ಟರ್ ಪ್ರಶಸ್ತಿ, ಶ್ರೀ ಶಶಿಕಾಂತರಾವ್ ದೇಸಾಯಿ ಇವರು ಉನ್ನತ ತರಬೇತಿ ಪಡೆದಿರುವ ಪ್ರಯುಕ್ತ ಸನ್ಮಾನಿಸಲಾಯಿತು. ವೇದಿಕೆಯಲ್ಲಿ ಶ್ರೀ ಪಂಚಾಕ್ಷರಯ್ಯ ಹಿರೇಮಠ, ಶ್ರೀ ಶರಣಪ್ಪ ಶಿಕ್ಷಣ ಸಂಯೋಜಕರು ಉಪಸ್ಥಿತರಿದ್ದರು. ಶ್ರೀ ಟಿ. ಶರಣಪ್ಪ ಸ್ವಾಗತಿಸಿದರು. ಶ್ರೀ ಚಂದ್ರಶೇಖರ ಪಾಟೀಲ್ ನಿರೂಪಿಸಿದರು. ಶ್ರೀ ಶಿವಪುತ್ರಪ್ಪ ಭೂತಲ್ ತಾಲೂಕ ಕಾರ್ಯದರ್ಶಿಗಳು ವಂದಿಸಿದರು.

* ದಿನಾಂಕ 14-09-2015 ರಂದು ಸ್ಕೌಟ್ಸ್ ಮತ್ತು ಯುವ ಸಮುದಾಯದಲ್ಲಿ ಶಿಸ್ತು, ನಾಯಕತ್ವ ಸೃಜನಶೀಲತೆ ಪರಿಸರ ಕಾಳಜಿ ಮೂಡಿಸುತ್ತದೆ ಎಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಹೇಳಿದರು. ಸಿಂಧನೂರು ನಗರದ ಕೋಟೆ ಕಲ್ಯಾಣ ಮಂಟಪದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆ ಮತ್ತು ಶಿಕ್ಷಣ ಇಲಾಖೆಯ ಸಹಯೋಗದಲ್ಲಿ ನಡೆದ ದಿ॥ ಕೊಂಡಜ್ಜಿ ಬಸಪ್ಪನವರ ಜನ್ಮ ಶತಮಾನೋತ್ಸವ ಸ್ಮರಣಾರ್ಥವಾಗಿ ತಾಲೂಕ ಮಟ್ಟದ ಸ್ಕೌಟರ್ಸ್-ಗೈಡರ್ಸ್ ಸಮಾವೇಶ ಮತ್ತು ಮುಖ್ಯೋಪಾಧ್ಯಾಯರುಗಳಿಗೆ, ಸಿ.ಆರ್.ಪಿ., ಬಿ.ಆರ್.ಪಿ. ಹಾಗೂ ಶಿಕ್ಷಣ ಸಂಯೋಜಕರುಗಳಿಗೆ ಸ್ಕೌಟ್ಸ್-ಗೈಡ್ಸ್ ಚಳವಳಿಗೆ ಸಂಬಂಧಿಸಿ ಸಾಮಾನ್ಯ ಮಾಹಿತಿ ಶಿಬಿರವನ್ನು ಉದ್ಘಾಟಿಸಿ ಅವರು ಮಾತನಾಡಿದರು. ಕೊಂಡಜ್ಜಿ ಬಸಪ್ಪನವರು ರಾಜಕಾರಣಕ್ಕಿಂತ ಹೆಚ್ಚು ಪ್ರಿಯವಾದ ಕ್ಷೇತ್ರ ಸ್ಕೌಟ್ಸ್-ಗೈಡ್ಸ್ ಚಳವಳಿಗೆ ಹೆಚ್ಚು ಒತ್ತು ನೀಡಿ ಬೆಳೆಸಿದರು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ಗೆ 107 ವರ್ಷಗಳ ಇತಿಹಾಸವಿದೆ. ವಿಶ್ವ ಶಾಂತಿಗಾಗಿ ಈ ಸಂಸ್ಥೆ ಶ್ರಮಿಸಿದೆ ಎಂದು ನುಡಿದರು. ತಾಲ್ಲೂಕು ಸಂಸ್ಥೆಗೆ ಸ್ಕೌಟ್ ಭವನ ಕಟ್ಟಡಕ್ಕಾಗಿ 10 ಲಕ್ಷ ರೂ ಅನುದಾನವನ್ನು ರಾಜ್ಯ ಸಂಸ್ಥೆಯಿಂದ ನಿಡುತ್ತೇವೆ ಎಂದು ಘೋಷಣೆ ಮಾಡಿದರು. ಅದಕ್ಕಾಗಿ ಶಾಸಕರು ಹಾಗು ನಗರ ಸಭೆ ಅಧ್ಯಕ್ಷರು ನಿವೇಶನದ ವ್ಯವಸ್ಥೆ ಮಾಡಿಕೊಡಲು ವಿನಂತಿಸಿಕೊಂಡರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಶಾಸಕ ಶ್ರೀ ಹಂಪನಗೌಡ ಬಾದರ್ಲಿ ಮಾತನಾಡಿ, ಸ್ಕೌಟ್ಸ್-ಗೈಡ್ಸ್ ಇದು ಶಿಕ್ಷಣ ಇಲಾಖೆಯ ಅವಿಭಾಜ್ಯ ಅಂಗವಾಗಿದೆ ಸ್ಕೌಟ್ಸ್-ಗೈಡ್ಸ್‌ಗಳಲ್ಲಿ ಆತ್ಮಸ್ಥೈರ್ಯ ಹಾಗೂ ವಿವೇಚನಾಶಕ್ತಿ ಬೆಳೆಸಲು ಈ ನಿಟ್ಟಿನಲ್ಲಿ ಸಂಸ್ಥೆಯು ತರಬೇತಿ ಆಯೋಜಿಸಿರುವುದು ಶ್ಲಾಘನೀಯ ಇಂಥ ಮಹತ್ವದ ಸಂಸ್ಥೆಗೆ ಶ್ರೀ ಪಿ.ಜಿ.ಆರ್. ಸಿಂಧ್ಯ ರಂತಹ ಅನುಭವಿ ವ್ಯಕ್ತಿಗಳು ರಾಜ್ಯ ಮುಖ್ಯ ಆಯುಕ್ತರಾಗಿರುವುದು ಒಳ್ಳೆಯದಾಗಿದೆ. ಅವರ ಸೇವೆಗೆ ನಾವೆಲ್ಲರೂ ಸಹಕಾರ ನೀಡಿ ತಾಲೂಕಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ತಂಡಗಳನ್ನು ಪ್ರಾಮಾಣಿಕತೆಯಿಂದ ಶಿಕ್ಷಣ ಇಲಾಖೆಯವರು ಮಾಡುವಂತೆ ತಿಳಿಸಿದರು. ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಕೆ. ತಿಮ್ಮಯ್ಯ ಮಾತನಾಡಿ, ತಾಲೂಕಿನಾದ್ಯಂತ ಶಾಲೆಗಳಲ್ಲಿ ಸ್ಕೌಟ್ಸ್-ಗೈಡ್ಸ್ ತಂಡಗಳು ಪ್ರಾರಂಭಿಸಿ ಮಕ್ಕಳ ಸರ್ವತೋಮುಖ ಅಭಿವೃದ್ಧಿಗಾಗಿ ಶಿಕ್ಷಕರು ಪ್ರಾಮಾಣಿಕ ಸೇವೆ ಸಲ್ಲಿಸಿ ಅವರ ಮತ್ತು ದೇಶದ ಭವಿಷ್ಯವನ್ನು ರೂಪಿಸಲು ಸಹಕಾರವಾಗಲಿದೆ ಎಂದರು. ರಾಜ್ಯಪಾಲರ ಪ್ರಶಸ್ತಿ ಪಡೆದ ತಾಲ್ಲೂಕಿನ ಸರ್ಕಾರಿ ಪ್ರಾಥಮಿಕ ಶಾಲೆ ಗದ್ರಟಗಿ ಮತ್ತು ರೌಡಕುಂದ ಶಾಲೆಯ ಕಬ್ಸ್ ಮತ್ತು ಸ್ಕೌಟ್ಸ್‌ಗಳನ್ನು ಸನ್ಮಾನಿಸಲಾಯಿತು. ಉನ್ನತ ತರಬೇತಿ ಪಡೆದಿರುವ ಶಿಕ್ಷಕರಾದ ಶ್ರೀ ರವಿ ಅಂತರವಳ್ಳಿ, ಶ್ರೀ ಮಲ್ಲಿಕಾರ್ಜುನ ಜೆ. ಶ್ರೀ ಶರೀಫ್ ಸಾಬ್ ಮತ್ತು ಶ್ರೀಮತಿ ಸೀಮಾ ಜೆ. ಇವರನ್ನು ರಾಜ್ಯ ಮುಖ್ಯ ಆಯುಕ್ತರು ಸನ್ಮಾನಿಸಿದರು. ಶ್ರೀಮತಿ ಎಸ್.ಕೆ. ಪ್ರಭ ರಾಜ್ಯ ಜಂಟಿ ಕಾರ್ಯದರ್ಶಿಗಳು ಇವರು ಸ್ಕೌಟ್ಸ್-ಗೈಡ್ಸ್‌ಗೆ ಸಂಬಂಧಿಸಿ ತರಬೇತಿ ನೀಡಿದರು. ಶ್ರೀ ರಾವುತರಾವ್ ಬರೂರ ಜಿಲ್ಲಾ ಸಂಘಟನಾ ಆಯುಕ್ತರು ಪ್ರಾಸ್ತಾವಿಕವಾಗಿ ಮಾತನಾಡಿದರು. ಶ್ರೀ ಎಸ್. ಶರಣೇಗೌಡ, ಅಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಇವರು ಸ್ವಾಗತಿಸಿದರು. ಶ್ರೀಮತಿ ಸೀಮಾ ಜೆ. ವಂದಿಸಿದರು. ಈ ಸಂದರ್ಭದಲ್ಲಿ ಶ್ರೀ ಜಾಫರ್ ಆಲಿ ಜಾಗೀರದಾರ ಅಧ್ಯಕ್ಷರು ನಗರಸಭೆ ಸಿಂಧನೂರು, ಶ್ರೀ ಅಮರಪ್ಪ ಭೋವಿ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಶ್ರೀ ಅಮರೇಗೌಡ ಪಾಟೀಲ್, ಜಿಲ್ಲಾ ಆಯುಕ್ತರು (ಸ್ಕೌ) ಜಿಲ್ಲಾ ಕಾರ್ಯದರ್ಶಿ ಶ್ರೀ ಹೆಚ್. ಹನುಮಂತಪ್ಪ, ಜಿಲ್ಲಾ ಖಜಾಂಚಿ ಶ್ರೀಮತಿ ಕೆ. ಆಲಿಯಾ ಖಾನಂ ಮತ್ತು ತಾಲೂಕಿನ ಎಲ್ಲ ಶಾಲೆಗಳ ಮುಖ್ಯಗುರುಗಳು, ಸಿ.ಆರ್.ಪಿ, ಬಿ.ಆರ್.ಪಿ. ಹಾಗೂ ಶಿಕ್ಷಣ ಸಂಯೋಜಕರುಗಳು ಭಾಗವಹಿಸಿದ್ದರು.

ದಿನಾಂಕ : 08-08-2015 ಭಾರತ್ ಸ್ಕೌಟ್ಸ್ – ಗೈಡ್ಸ್ ಜಿಲ್ಲಾ ಸಂಸ್ಥೆಯ ವತಿಯಿಂದ ದಿ॥ ಕೊಂಡಜ್ಜಿ ಬಸಪ್ಪನವರ ಜನ್ಮ ಶತಮಾನೋತ್ಸವದ ಸ್ಮರಣಾರ್ಥವಾಗಿ ರೋವರ್ಸ್ ಮತ್ತು ರೇಂಜರ್ಸ್‌ಗಳ ಚಳವಳಿಯನ್ನು ಸಮಾಜಕ್ಕೆ ಪರಿಚಯಿಸುವ ಮತ್ತು ಪ್ರಚಾರಿಸುವ ಕುರಿತು ಸ್ಕೌಟ್ಸ್-ಗೈಡ್ಸ್ & ರೋವರ್ಸ್-ರೇಂಜರ್ಸ್‌ಗಳಿಂದ ಸೈಕಲ್ ಜಾಥಾ ಕಾರ್ಯಕ್ರಮವನ್ನು ಜಿಲ್ಲಾ ಕ್ರೀಡಾಂಗಣದಲ್ಲಿ ಶ್ರೀ ಚಂದ್ರಶೇಖರ್ ನೀಲಗಾರ ಡಿ.ವೈ.ಎಸ್.ಪಿ. ರಾಯಚೂರು ಹಾಗೂ ಶ್ರೀ ಅಯ್ಯನಗೌಡ ಪಾಟೀಲ್ ಪಿ.ಎಸ್.ಐ. ನಗರ ಸಂಚಾರ ಪೋಲೀಸ್ ಠಾಣೆ ರಾಯಚೂರು ಇವರು ಹಸಿರು ನಿಶಾನೆ ತೋರಿಸಿ ಚಾಲನೆ ನೀಡಿದರು.

ದಿನಾಂಕ 09-10-2015 ರಂದು ಜಾಥಾವು ನಗರದ ಬಸವೇಶ್ವರ ಸರ್ಕಲ್-ಗಾಂಧಿ ಚೌಕ್-ಚಂದ್ರಮೌಳೇಶ್ವರ ಸರ್ಕಲ್-ಪಟೇಲ್ ಚೌಕ್-ಶೇಟ್ಟಿ ಭಾವಿ ಚೌಕ್-ತೀನ್ ಕಂದಿಲ್-ಮಹಿಳಾ ಸಮಾಜ-ಕೇಂದ್ರ ಬಸ್ ನಿಲ್ದಾಣ-ಅಂಬೇಡ್ಕರ್ ಸರ್ಕಲ್ ಮಾರ್ಗವಾಗಿ ರೈಲ್ವೆ ನಿಲ್ದಾಣಕ್ಕೆ ಬಂದು ಸೇರಿತು. ಅಲ್ಲಿ ಶ್ರೀ ಅಮರೇಗೌಡ ಪಾಟೀಲ್ ಮಾತನಾಡಿ, ಕರ್ನಾಟಕದಲ್ಲಿ ಸ್ಕೌಟಿಂಗ್/ಗೈಡಿಂಗ್‌ನ ಅಭಿವೃದ್ಧಿಗಾಗಿ ಕಂಕಣಬದ್ಧರಾಗಿ ದುಡಿದ ಮಹನೀಯರು ಚಳವಳಿಯ ಅಭಿವೃದ್ಧಿಗಾಗಿ ಅಧಿಕಾರಿಗಳ ಮನೆ ಮನೆಗೆ ತೆರಳಿ ಮಕ್ಕಳಿಗಾಗಿ ವಿವಿಧ ಯೋಜನೆಗಳನ್ನು ರೂಪಿಸಿ ಜಾರಿಗೆ ತಂದು ಚಳವಳಿಯನ್ನು ಅಮೋಘವಾಗಿ ಬೆಳೆಸಿದ ಹರಿಕಾರರು. ಈ ಮಹನಿಯರ ಜನ್ಮ ಶತಮಾನೋತ್ಸವವನ್ನು ಕರ್ನಾಟಕದಾದ್ಯಂತ ವಿಶೇಷವಾಗಿ ಆಚರಿಸುತ್ತಿರುವ ಸಂದರ್ಭದಲ್ಲಿ ರಾಯಚೂರು ಜಿಲ್ಲಾ ಸಂಸ್ಥೆಯು ಅವರಿಗೆ ಇಂಥ ಕಾರ್ಯಕ್ರಮಗಳನ್ನು ಮಾಡಿ ಜನರಿಗೆ ಪರಿಚಯಿಸುವ ಕಾರ್ಯ ಮಾಡಲಾಗುತ್ತಿದೆ ಎಂದರು. ಈ ಸಂದರ್ಭದಲ್ಲಿ ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಮುಖ್ಯ ಆಯುಕ್ತರು ಶ್ರೀಮತಿ ಅಜೀಜಾ ಸುಲ್ತಾನ ಹಾಗೂ 150 ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಜಾಥಾದಲ್ಲಿ ಭಾಗವಹಿಸಿದ್ದರು.

## ಶಿವಮೊಗ್ಗ

ದಿನಾಂಕ 28.08.2015 ರಿಂದ 31.08.2015 ರವರೆಗೆ "ಜಿಲ್ಲಾ ಮಟ್ಟದ ಸೀನಿಯರ್ ರೋವರ್ಸ್ ರೇಂಜರ್ಸ್ ಮೇಟ್ ತರಬೇತಿ ಶಿಬಿರ" ಹಾಗೂ "ಜಿಲ್ಲಾ ಮಟ್ಟದ ರೋವರ್ಸ್ ರೇಂಜರ್ಸ್ ನಿಪುಣ್ ಪರೀಕ್ಷಾ ಶಿಬಿರ"ವನ್ನು ಜಿಲ್ಲಾ ಸ್ಕೌಟ್ಸ್ ಭವನದಲ್ಲಿ ನಡೆಸಲಾಯಿತು. ಈ ಶಿಬಿರದಲ್ಲಿ ಶಿವಮೊಗ್ಗ ಜಿಲ್ಲೆಯ ಸರ್ಕಾರಿ ಪದವಿ ಪೂರ್ವ ಕಾಲೇಜು ಹಾಗು ಸರ್ಕಾರಿ ಪ್ರಥಮ ದರ್ಜೆ

ಕಾಲೇಜಿನ ರೋವರ್ಸ್ ರೇಂಜರ್ಸ್‌ಗಳು ಭಾಗವಹಿಸಿದ್ದರು. ಸಿನೀಯರ್ಸ್ ರೋವರ್ಸ್/ ರೇಂಜರ್ಸ್ ಮೇಟ್ ತರಬೇತಿ ಶಿಬಿರಕ್ಕೆ ರೋವರ್ಸ್ 24, ರೇಂಜರ್ಸ್ 20, ಮತ್ತು ನಿಪುಣ್ ಪರಿಕ್ಷಾ ಶಿಬಿರಕ್ಕೆ ರೋವರ್ಸ್ 35 ರೇಂಜರ್ಸ್ 32 ಭಾಗವಹಿಸಿದ್ದರು.

ದಿನಾಂಕ : 28.08.2015 ರ ಸಂಜೆ ಎಲ್ಲಾ ರೋವರ್ಸ್ ರೇಂಜರ್ಸ್ ಗಳನ್ನು ಪೇಟ್ರೋಲ್‌ಗಳಲ್ಲಿ ವಿಗಂಡಿಸಲಾಯಿತು. ಶಿಬಿರದ ನಿಯಮಗಳನ್ನು ತಿಳಿಸಿಕೊಡಲಾಯಿತು. ನಂತರ ಸ್ಕೌಟಿಂಗ್‌ನ ಇತಿಹಾಸವನ್ನು ತಿಳಿಸಿಕೊಡಲಾಯಿತು.

ದಿನಾಂಕ : 29.08.2015 ರಂದು ಶಿಬಿರದ ಉದ್ಘಾಟನಾ ಕಾರ್ಯಕ್ರಮವನ್ನು ಡಾ॥ ಮುರುಳಿಧರ್, ಜಂಟಿ ನಿರ್ದೇಶಕರು ಕಾಲೇಜು ಶಿಕ್ಷಣ ಇವರು ನೆರೆವರಿಸಿದರು. ಶ್ರೀಯುತರು ಮಾತನಾಡುತ್ತಾ ರೋವರ್ಸ್ ರೇಂಜರ್ಸ್ ಘಟಕಗಳಲ್ಲಿ ಅತ್ಯುತಮವಾದ ತರಬೇತಿಗಳು ಇದೆ. ಆ ತರಬೇತಿಗಳನ್ನು ಪಡೆದವರು ಅತ್ಯುತಮ ಪ್ರಜೆಗಳು ಆಗುವುದರಲ್ಲಿ ಯಾವುದೇ ಸಂದೇಹವಿಲ್ಲ. ಎಲ್ಲಾ ಕಾಲೆಜುಗಳಲ್ಲಿ ಈ ರೋವರ್ಸ್ / ರೇಂಜರ್ಸ್ ಸರಿಯಾಗಿ ನಡೆಯುವುದರ ಬಗ್ಗೆ ಎಲ್ಲರು ಶ್ರಮಿಸೋಣ ಉತ್ತಮ ಪ್ರಜೆಗಳನ್ನು ತಯಾರು ಮಾಡೋಣ ಎಂದರು. ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಹೆಚ್ ಡಿ ರಮೇಶ್ ಶಾಸ್ತ್ರಿ ಇವರು ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿ ಮಾತನಾಡುತ್ತಾ, ಎಲ್ಲಾ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಅತ್ಯುತ್ತಮ ಸಹಕಾರ ಸಿಕ್ಕಿದೆ. ಹಾಗಾಗಿ ಅನೇಕ ತರಬೇತಿಗಳನ್ನು ರೋವರ್ಸ್-ರೇಂಜರ್ಸ್‌ಗಳಿಗೆ ನೀಡಿದ್ದೇವೆ. ಎಂದು ಹೇಳಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದು ಕುಮಾರ್ ರವರು ಸ್ವಾಗತಿಸಿದರು. ಶ್ರೀ ಕೆ.ರವಿ ಜಿಲ್ಲಾ ಕೇಂದ್ರ ಸ್ಥಾನಿಕ ಆಯುಕ್ತರು ಪ್ರಾಸ್ತಾವಿಕ ನುಡಿಯನ್ನು ಹೇಳಿದರು. ಶ್ರೀ ಎನ್.ಆರ್. ಪ್ರಕಾಶ್ ಜಿಲ್ಲಾ ಸಹ ಕಾರ್ಯದರ್ಶಿ ವಂದನಾರ್ಪಣೆ ಮಾಡಿದರು.

ನಿಪುಣ್ ಪರೀಕ್ಷಾ ಶಿಬಿರದಲ್ಲಿ ಶ್ರೀ ಎ.ವಿ. ರಾಜೇಶ್ ಮತ್ತು ಕು॥ಪ್ರಿಯಾಂಕ ಹೆಚ್.ಎಂ. ಜಿಲ್ಲಾ ಸಂಘಟಕರು ನಾಯಕತ್ವ ವಹಿಸಿದ್ದರು. ನಂತರ ಸಿನೀಯರ್ ರೋವರ್ಸ್ ರೇಂಜರ್ಸ್ ವಿಭಾಗದ ನಾಯಕರಾಗಿ ಶ್ರೀ ವೈ.ಆರ್ ವೀರೇಶಪ್ಪ ರವರು ತರಬೇತಿಗಳನ್ನು ಮುಂದುವರೆಸಿದರು ಪ್ರತಿಜ್ಞೆ ಮತ್ತು ನಿಯಮ. ಪ್ರಾರ್ಥನಾ ಗೀತೆ, ಧ್ವಜಾ ಗೀತೆ, ಧ್ವಜಗಳ ಬಗ್ಗೆ ಸಮವಸ್ತ್ರದ ಬಗ್ಗೆ ಹಾಗೂ ಧ್ವಜ ನಿರ್ಮಾಣದ ಬಗ್ಗೆ ತರಬೇತಿ ನೀಡಲಾಯಿತು, ನಂತರ "ವೀರಗಾಸೆ" ಗೀತ ಭಾರತಿ" ಅಭ್ಯಾಸ ಮಾಡಿಸಲಾಯಿತು.

ದಿನಾಂಕ 30.08.2015 ರಂದು ರೊವರ್ಸ್/ ರೇಂಜರ್ಸ್‌ಗಳಿಗೆ ಶ್ರೀ ರಾಮೇಶ್ವರ ದೇವಸ್ಥಾನ ಹರಕೇರೆಯಲ್ಲಿ ಒಂದು ದಿನದ ಹೊರ ಸಂಚಾರ ಕರೆದುಕೊಂಡು ಹೋಗಲಾಯಿತು. ಅಲ್ಲಿ ಶ್ರೀ ಎಸ್.ಟಿ ಶ್ರೀನಿವಾಸ ವರ್ಮ ರವರು ಅಂದಾಜು ಮಾಡುವ ಬಗ್ಗೆ ತಿಳಿಸಿದರು ನಂತರ ಶ್ರಿ ಪರಮೇಶ್ವರ್, ಇವರು ಟ್ರಸಲ್ ನಿರ್ಮಾಣದ ಬಗ್ಗೆ ತಿಳಿಸಿದರು. ನಂತರ ಸಂಜೆ ಶಿಬಿರಾಗ್ನಿ ಕ್ರಮವನ್ನು ನಡೆಸಲಾಯಿತು ನಂತರ ನಿಪುಣ್ ಪರೀಕ್ಷಾ ಶಿಬಿರದಲ್ಲಿ ಭಾಗವಹಿಸಿದ ಮಕ್ಕಳಿಗೆ ಲಿಖಿತ ಪರೀಕ್ಷಾ ಶಿಬಿರವನ್ನು ನಡೆಸಲಾಯಿತು.

* ದಿನಾಂಕ 31.08.2015 ರಂದು ದಿ॥ ಕೊಂಡಜ್ಜಿ ಬಸಪ್ಪ ನವರ ಜನ್ಮಶತಮಾನೋತ್ಸವ ಕಾರ್ಯಕ್ರಮವನ್ನು ಶಿವಮಾಗ್ಗದ ಕುವೆಂಪು ರಂಗ ಮಂದಿರದಲ್ಲಿ ಹಮ್ಮಿಕೊಳ್ಳಲಾಯಿತು. ಶ್ರೀಮತಿ ವಿಜಯ ಲಕ್ಷ್ಮಿ ಜಿಲ್ಲಾ ಆಯುಕ್ತರು ಇವರು ಸ್ಕೌಟ್ಸ್ ಗೈಡ್ಸ್ ನ ಧ್ಯೆಯೋದ್ದೇಶವನ್ನು ಪ್ರತಿಬಿಂಬಿಸುವ ಕಿರುನಾಟಕದೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರು ಶ್ರೀ ಹೆಚ್.ಡಿ. ರಮೇಶ್ ಶಾಸ್ತ್ರಿ ವಹಿಸಿದ್ದರು. ಉದ್ಘಾಟಕರಾಗಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ.ಪಿ.ಜಿ.ಆರ್ ಸಿಂಧ್ಯ ರವರು ಭಾಗವಹಿಸಿದ್ದರು. ಮುಖ್ಯ ಆತಿಥಿಗಳಾಗಿ ಸನ್ಮಾನ್ಯ ಶ್ರೀ ಡಿ.ಹೆಚ್. ಶಂಕರ್ ಮೂರ್ತಿ ಮಾನ್ಯ ಸಭಾಪತಿಗಳು ವಿಧಾನ ಪರಿಷತ್ ಕರ್ನಾಟಕ ಸರ್ಕಾರ ಹಾಗೂ ವಿಧಾನ ಪರಿಷತ್ ಸದಸ್ಯರಾದ ಸನ್ಮಾನ್ಯ ಶ್ರೀ ಭಾನು ಪ್ರಕಾಶ್ ಹಾಗೂ ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.

ಜಿಲ್ಲಾ ಆಯುಕ್ತರು(ಗೈಡ್ಸ್) ಶ್ರೀಮತಿ ಎಸ್.ಆರ್. ವಿಜಯ ಲಕ್ಷ್ಮಿ ಎಲ್ಲರನ್ನು ಸ್ವಾಗತಿಸಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ ಬಿಂದುಕುಮಾರ್ ರವರು ಶ್ರೀ ದಿ॥ ಕೊಂಡಜ್ಜಿ ಬಸಪ್ಪನವರ ಜೀವನ ಚರಿತ್ರೆಯನ್ನು ಪರಿಚಯಿಸಿದರು. ವೇದಿಕೆಯಲ್ಲಿದ್ದ ಎಲ್ಲಾ ಗಣ್ಯರು ಜ್ಯೋತಿ ಬೆಳಗಿಸಿ ಕೊಂಡಜ್ಜಿ ಬಸಪ್ಪನವರ ಭಾವಚಿತ್ರಕ್ಕೆ ಪುಷ್ಪಾರ್ಚನೆ ಮಾಡುವುದರ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು ಶ್ರೀ.ಪಿ.ಜಿ.ಆರ್.ಸಿಂಧ್ಯ ರವರು ಮಾತನಾಡುತ್ತಾ "ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಕೊಂಡಜ್ಜಿ ಬಸಪ್ಪ ನವರ ಸೇವೆ ಅಪಾರವಾದದು ಅವರ ಇಡೀ ಕುಟುಂಬ ಸಂಸ್ಥೆಯ ಏಳಿಗೆಗಾಗಿ ದುಡಿಯುತ್ತಿದೆ. ಅವರ ಅನೇಕ ಕನಸುಗಳು ಹಾಗೇ ಉಳಿದಿರುವುದರಿಂದ ನಾವು, ಸಾರ್ವಜನಿಕರು ಸೇರಿ ಮಾಡ ಬೇಕಾಗಿದೆ ಎಂದು ನುಡಿದರು.

ಶ್ರೀ ಡಿ.ಹೆಚ್. ಶಂಕರ ಮೂರ್ತಿ ಯವರು ಮಾತನಾಡುತ್ತಾ ಕೊಂಡಜ್ಜಿ ಬಸಪ್ಪನವರ ಕನಸುನ್ನು ನನಸಾಗಿಸಲು ನನ್ನ ಕೈಲಾದ ಸಹಕಾರವನ್ನು ನೀಡುತ್ತೇನೆಂದು ಭರವಸೆ ನೀಡಿದರು, ಮತ್ತೋರ್ವ ಮುಖ್ಯ ಅತಿಥಿ ವಿಧಾನ ಪರಿಷತ್ ಸದಸ್ಯರಾದ ಶ್ರೀ ಎನ್.ಬಿ. ಭಾನುಪ್ರಕಾಶ್ ರವರು ಮಾತನಾಡುತ್ತಾ ವಿದ್ಯಾರ್ಥಿದೆಸೆಯಲ್ಲೇ ಸ್ಕೌಟ್ಸ್ ಗೈಡ್ಸ್ ಸಂಸ್ಥೆಗೆ ಸದಸ್ಯನಾಗ ಬೇಕಿದ್ದ ನಾನು ರಾಜಕೀಯದೆಡೆಗೆ ಆಕರ್ಷಿತನಾದೆ ಆದರೆ ಈಗಲೂ ಈ ಸಂಸ್ಥೆಯ ಒಲವು ನನ್ನಲ್ಲಿದೆ ಯಾವ ಸಂದರ್ಭದಲ್ಲಾದರೂ ಈ ಸಂಸ್ಥೆಯ ಕೆಲಸ ಮಾಡುವುದಾಗಿ ಭರವಸೆ ನೀಡಿದರು.

ನಂತರ ಜಿಲ್ಲಾ ಮುಖ್ಯ ಆಯುಕ್ತರು ಶ್ರೀ ಹೆಚ್.ಡಿ. ರಮೇಶ್ ಶಾಸ್ತ್ರಿ ಯವರು ಅಧ್ಯಕ್ಷಿಯ ನುಡಿಗಳನ್ನು ನುಡಿದರು ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀ ಉಮೇಶ್ ರವರು ವಂದಿಸಿದರು. ಶ್ರೀ ಎ.ವಿ. ರಾಜೇಶ್ ರವರು ಕಾರ್ಯಕ್ರಮವನ್ನು ನಿರೂಪಿಸಿದರು, ಈ ಕಾರ್ಯಕ್ರಮದಲ್ಲಿ ವಿವಿಧ ಶಾಲೆಗಳ ಕಬ್ಸ್, ಸ್ಕೌಟ್ಸ್ , ರೋವರ್ಸ್, ಬುಲ್ಸ್ ಬುಲ್ಸ್, ಗೈಡ್ಸ್, ರೇಂಜರ್ಸ್ ಹಾಗೂ ಗೈಡ್ಸ್ ಕ್ಯಾಪ್ಟನ್ ಸ್ಕೌಟ್ ಮಾಸ್ಟರ್ಸ್ ಗಳು ಎಲ್ಲಾ ತಾಲ್ಲೂಕುಗಳ ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳು ಎ.ಡಿ.ಸಿಗಳು ಮಾಜಿ ಜಿಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.

ಮಧ್ಯಾನ 2.30 ಕ್ಕೆ ಶಿವಮಾಗ್ಗದ ಕೋಟೆ ರಸ್ತೆಯಲ್ಲಿರುವ ಶಿವಪ್ಪ ನಾಯಕ ಅರಮನೆಯಲ್ಲಿ ಕೈಗಾರಿಕಾ ಸಂಘದ ಸಧ್ಯಕ್ಷರಾದ ಶ್ರೀ ಡಿ.ಎಸ್.ಅರುಣ್, ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ, ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಹೆಚ್.ಡಿ.ರಮೇಶ್ ಶಾಸ್ತ್ರಿ ಅರಮನೆ ಮುಖ್ಯಸ್ಥರಾದ ಶ್ರೀಮತಿ ಅನುರಾದ ರವರು ನೇತೃತ್ವದಲ್ಲಿ ಕಬ್ಸ್, ಸ್ಕೌಟ್ಸ್, ಬುಲ್ಸ್ ಬುಲ್ಸ್, ಗೈಡ್ಸ್‌ಗಳಿಂದ ಸ್ವಚ್ಛತಾ ಕಾರ್ಯಕ್ರಮ ಹಮ್ಮಿ ಕೊಳ್ಳಲಾಗಿತ್ತು.

* ದಿನಾಂಕ 04-09-2015 ರಂದು ತೃತೀಯ ವಲಯ ಮಟ್ಟದ ಸಮಾವೇಶವನ್ನು ಸರ್ಕಾರಿ ಸರ್.ಎಂ.ವಿ. ಪ್ರಥಮ ದರ್ಜೆ ಕಲಾ ಮತ್ತು ವಾಣಿಜ್ಯ ಕಾಲೇಜ್ ನ್ಯೂಟೌನ್ ಭದ್ರಾವತಿಯಲ್ಲಿ ಹಮ್ಮಿಕೊಂಡಿದ್ದು ಧ್ವಜಾರೋಹಣದ ಮೂಲಕ ಕಾರ್ಯಕ್ರಮ ಪ್ರಾರಂಭವಾಯಿತು. ಉದ್ಘಾಟನಾ ಸಮಾವೇಶದ ಅಧ್ಯಕ್ಷತೆಯನ್ನು ಶ್ರೀ ಎನ್. ನಾರಾಯಣಪ್ಪ ಅಧ್ಯಕ್ಷರು, ಸ್ಥಳೀಯ ಸಂಸ್ಥೆ ಭದ್ರಾವತಿ ವಹಿಸಿಕೊಂಡಿದ್ದರು. ರೋವರ್ಸ್ ಲೀಡರ್ಸ್ ಆದ ಶ್ರೀಯುತ ಷಣ್ಮುಖಪ್ಪ, ಪ್ರೊಫೆಸರ್ ಕನ್ನಡ ವಿಭಾಗ ಇವರು ಎಲ್ಲರನ್ನೂ ಸ್ವಾಗತಿಸಿದರು. ಸಮಾವೇಶದ ಉದ್ಘಾಟನೆಯನ್ನು ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಮೋಹನ್ ಕುಮಾರ ರವರು ನೆರವೇರಿಸಿ, ಉದ್ಘಾಟನಾ ನುಡಿಗಳಲ್ಲಿ ಸ್ಕೌಟ್ಸ್-ಗೈಡ್ಸ್ ಹಾಗೂ ರೋವರ್ಸ್-ರೇಂಜರ್ಸ್‌ಗಳು ಶಿಸ್ತು, ನಾಯಕತ್ವ, ಸಂಯಮ ಗುಣಗಳನ್ನು ಬೆಳೆಸಿಕೊಂಡು ಉತ್ತಮ ಪ್ರಜೆಗಳಾಗಿ ಶಾಲೆಗೆ, ಕಾಲೇಜಿಗೆ, ತಂದೆತಾಯಿಗಳಿಗೆ ಹೆಸರು ತನ್ನಿ ಈ ಸಮಾವೇಶದ ಮಾಹಿತಿಯನ್ನು ಪಡೆದು ಜೀವನದಲ್ಲಿ ಅಳವಡಿಸಿಕೊಳ್ಳಿ ಎಂದು ನುಡಿದು ಶುಭಹಾರೈಸಿದರು. ಅತಿಥಿಗಳಾದ ಶ್ರೀ ಹೆಚ್. ಶಿವಶಂಕರ್ ಪ್ರಾಸ್ತಾವಿಕ ನುಡಿಗಳಲ್ಲಿ ಸ್ಕೌಟ್ಸ್-ಗೈಡ್ಸ್ ಇತಿಹಾಸ ನಡೆದು ಬಂದ ದಾರಿ ಬಗ್ಗೆ ಮಾಹಿತಿ ನಿಡಿದರು. ಕಾರ್ಯದರ್ಶಿ ಯವರಾದ ಶ್ರೀ ಜಿ.ಟಿ. ಗುರುಲಿಂಗಪ್ಪನವರು ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್, ಜಿಲ್ಲಾ ತರಬೇತಿ, ರಾಜ್ಯ, ರಾಷ್ಟ್ರ, ತರಬೇತಿಗಳನ್ನು ಪಡೆದು ಸರ್ಕಾರದಿಂದ ಸಿಗುವ ಶೇಕಡ 5% ಸೌಲಭ್ಯವನ್ನು ಪಡೆದುಕೊಳ್ಳಿ ಎಂಬುದಾಗಿ ತಿಳಿಸಿದರು. ಅಧ್ಯಕ್ಷತೆ ವಹಿಸಿದ್ದ ಶ್ರೀ ಎನ್. ನಾರಾಯಣಪ್ಪ ನವರು ಈ ಸಮಾವೇಶದ ಸದುಪಯೋಗ ಪಡೆದುಕೊಂಡು ಶಿಸ್ತು, ನಾಯಕತ್ವದ ಗುಣಗಳನ್ನು ಅಳವಡಿಸಿಕೊಳ್ಳಿ ಎಂಬುದಾಗಿ ತಿಳಿಸಿದರು. ಕೊನೆಯದಾಗಿ ಶ್ರೀಮತಿ ಸರಹನಾ ಅಂಜುಂ ವಂದನೆಗಳನ್ನು ಅರ್ಪಿಸಿದರು. ಈ ಸಮಾವೇಶಕ್ಕೆ ಶಾಲಾ-ಕಾಲೇಜುಗಳಿಂದ ಒಟ್ಟು 146 ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು, 11 ಸ್ಕೌಟರ್ಸ್-ಗೈಡರ್ಸ್, ರೋವರ್ಸ್-ರೇಂಜರ್ಸ್, ಲೀಡರುಗಳು ಭಾಗವಹಿಸಿದ್ದರು. ಶಿಬಿರದ ನಾಯಕತ್ವನ್ನು ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಹೆಚ್. ಶಿವಶಂಕರ್ ವಹಿಸಿಕೊಂಡಿದ್ದರು.

## ತುಮಕೂರು

ದಿನಾಂಕ 02-10-2015 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ತುಮಕೂರು ಇಲ್ಲಿ ಸರ್ವಧರ್ಮ ಪ್ರಾರ್ಥನೆಯನ್ನು ಗಾಂಧಿ ಜಯಂತಿ ಅಂಗವಾಗಿ ನಡೆಸಲಾಯಿತು. ನಂತರ ಸ್ವಚ್ಛತಾ ಕಾರ್ಯಕ್ರಮ ಹಮ್ಮಿಕೊಳ್ಳಲಾಯಿತು. ಮುಂದಿನ 5 ದಿನಗಳ ಕಾಲ ನಗರದ ವಿವಿದೆಡೆ ಸ್ವಚ್ಛತಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮವನ್ನು ನವೆಂಬರ್ ತಿಂಗಳಿನಲ್ಲೂ ಕೂಡ ನಡೆಸಲು ತೀರ್ಮಾನಿಸಲಾಗಿದೆ.

## ಉಡುಪಿ

ದಿನಾಂಕ: 29-08-2015 ರಂದು ಕಾರ್ಕಳದ ಮಂಜುನಾಥ ಪೈ ಸ್ಮಾರಕ ಸರಕಾರಿ ಪ್ರಥಮ ದರ್ಜೆ ಕಾಲೇಜಿನ ರೋವರ್ಸ್ ಮತ್ತು ರೇಂಜರ್ಸ್ ಘಟಕಗಳ ವತಿಯಿಂದ ಸಾರ್ವಜನಿಕರಲ್ಲಿ ಸ್ವಚ್ಛತೆಯ ಅರಿವನ್ನು ಮೂಡಿಸುವ ನಿಟ್ಟಿನಲ್ಲಿ ಸ್ವಚ್ಛತಾ ಅಭಿಯಾನವನ್ನು ಹಮ್ಮಿಕೊಳ್ಳಲಾಯಿತು. ಇತರ ಕಾಲೇಜಿನ ಸ್ವ ಆಸಕ್ತ ವಿದ್ಯಾರ್ಥಿಗಳನ್ನು ಸೇರಿದಂತೆ ಸುಮಾರು 105 ರೋವರ್ಸ್ ಮತ್ತು ರೇಂಜರ್ಸ್ ವಿದ್ಯಾರ್ಥಿಗಳು ಇದರಲ್ಲಿ ಭಾಗವಹಿಸಿ ಬಂಡಿಮಠ ಬಸ್ ನಿಲ್ದಾಣದಿಂದ ಮುಖ್ಯ ಬಸ್ ನಿಲ್ದಾರಣದ ವರೆಗೂ ಸ್ವಚ್ಛತಾ ಕಾರ್ಯವನ್ನು ಕೈಗೊಂಡರು. ಕಾರ್ಕಳ ಪುರಸಭೆಯ ಮುಖ್ಯಾಧಿಕಾರಿಗಳಾದ ಶ್ರೀ ರಾಯಪ್ಪ ಅವರು ಕಾರ್ಯಕ್ರಮವನ್ನು ಉದ್ಘಾಟಿಸಿ ಅಭಿಯಾನದಲ್ಲಿ ಪಾಲ್ಗೊಂಡರು. ಪ್ರಾಂಶುಪಾಲರಾದ ಪ್ರೊ. ಶ್ರೀವರ್ಮ ಅಜ್ರಿ ಎಂ. ಮಾತನಾಡಿ ಶುಭ ಹಾರೈಸಿದರು. ಕಾಲೇಜಿನ ರೋವರ್ಸ್ ಮತ್ತು ರೇಂಜರ್ಸ್ ಘಟಕಗಳ ನೋಡಲ್ ಆಫೀಸರ್‌ಗಳಾದ ಶ್ರೀ ಕೃಷ್ಣಮೂರ್ತಿ ವೈದ್ಯ, ಶ್ರೀಮತಿ ಜ್ಯೋತಿ ಎಲ್. ಜೆ. ಪುರಸಭಾಧ್ಯಕ್ಷರಾದ ಶ್ರಿಮತಿ ರೆಹಮತ್ ಎನ್. ಶೇಕ್, ಉಪಾಧ್ಯಕ್ಷರಾದ ಶ್ರೀಮತಿ ಶಶಿಕಲಾ, ಪರಿಸರ ಅಭಿಯಮತರರಾದ ಶ್ರೀ ಮದನ್, ಉಪನ್ಯಾಸಕಿ ವೇದಾವತಿ ಮತ್ತು ಇತರ ವಿದ್ಯಾರ್ಥಿಗಳು ಸ್ವಚ್ಛತಾ ಅಭಿಯಾನದಲ್ಲಿ ಪಾಲ್ಗೊಂಡರು.

## ವಿಜಯಪುರ

ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿಯವರು ಈ ದೇಶಕ್ಕೆ ಓರ್ವ ವ್ಯಕ್ತಿಯಾಗಿರದೆ ಸಮಸ್ತ ಭಾರತೀಯರಿಗೆ ಶಕ್ತಿಯಾಗಿದ್ದರು. ಅವರು ಸಾಗಿಬಂದ ಜೀವನ ಕ್ರಮ ನಮಗೆಲ್ಲ ಆದರ್ಶಪ್ರಾಯವಾಗಿದೆ. ಅದನ್ನು ಅನುಸರಿಸಿ ನಡೆಯಬೇಕು ಎಂದು ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಪ್ರಧಾನ ಆಯುಕ್ತ ಶ್ರೀ ಸಿದ್ಧಣ್ಣ ಎಮ್. ಸಕ್ರಿಯವರು ಸ್ಕೌಟ್-ಗೈಡ್‌ಗಳಿಗೆ ಕರೆ ನೀಡಿದರು. ಗಾಂಧೀ ಜಯಂತಿ ಪ್ರಯುಕ್ತ ಜಿಲ್ಲಾ ಕಾರ್ಯಾಲಯದಲ್ಲಿ ಹಮ್ಮಿಕೊಂಡ ಪೂಜಾಕಾರ್ಯಕ್ರಮ ನೆರವೇರಿಸಿ ನಗರದ ಕೆ.ಜಿ.ಎಸ್. ನಂ. 9 ರ ಶಾಲಾ ಸ್ಕೌಟ್ಸ್-ಗೈಡ್ಸ್‌ಗಳೊಂದಿಗೆ ಕಾರ್ಯಾಲಯದ ಆವರಣವನ್ನು ಶುಚಿಗೊಳಿಸಲಾಯಿತು. ಈ ಸಂದರ್ಭದಲ್ಲಿ ಕಾರ್ಯದರ್ಶಿ ಶ್ರೀ ಎಸ್.ಎಸ್. ಬೊಮ್ಮನಹಳ್ಳಿ, ಗೈಡ್ ಆಯುಕ್ತೆ ಶ್ರೀಮತಿ ಭಾಗ್ಯಶ್ರಿ ಸಿಂದಗೀಕರ ಉಪಾಧ್ಯಕ್ಷ ಶ್ರೀ ಸುರೇಶ ಶಡಶಾಳ ಸಹ ಕಾರ್ಯದರ್ಶಿ ಶರಣು ಸಬರದ ಮತ್ತು ಜಿಲ್ಲಾ ಸಂಘಟನಾ ಆಯುಕ್ತ ಎಮ್. ಎಚ್. ಕುಂಬಾರ ಉಪಸ್ಥಿತರಿದ್ದರು.

## ಶ್ರದ್ಧಾಂಜಲಿ



ಶಿರಸಿ ಶೈಕ್ಷಣಿಕ ಜಿಲ್ಲೆಯ ಪ್ರಥಮ ಜಿಲ್ಲಾ ಸಂಘಟನಾ ಆಯುಕ್ತರಾಗಿ ಕಾರ್ಯನಿರ್ವಹಿಸಿದ್ದ ಶಿಕ್ಷಕ ಶ್ರೀ ರಾಮಾ ಎನ್. ಪಟಗಾರ (38 ವರ್ಷ) ಅಲ್ಪಕಾಲಿನ ಅನಾರೋಗ್ಯದಿಂದ ದಿನಾಂಕ : 11-10-2015 ರಂದು ನಿಧನ ಹೊಂದಿದರು ಶಿರಸಿ ತಾಲೂಕಿನ ಬನವಾಸಿಯ ಸಮೂಹ ಸಂಪನ್ಮೂಲ ವ್ಯಕ್ತಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಇವರು ಸಹಾಯಕ ಜಿಲ್ಲಾ ಕಾರ್ಯದರ್ಶಿಯಾಗಿಯೂ ಜವಾಬ್ದಾರಿ ಹೊತ್ತಿದ್ದರು. ಕಬ್ ವಿಭಾಗದಲ್ಲಿ ಹಿಮಾಲಯ ವೃಕ್ಷಮಣಿಧಾರಕರಾದ ಇವರು ಚತುರ್ಥ ಚರಣ್ ಪ್ರಶಸ್ತಿಗೆ ಕಬ್ಸ್‌ಗಳಿಗೆ ತರಬೇತಿಯನ್ನು ನೀಡಿದ್ದರು.

ಮೃತರ ಆತ್ಮಕ್ಕೆ ಚಿರಶಾಂತಿ ನೀಡಲೆಂದೂ, ಅವರ ಅಗಲಿಕೆಯಿಂದಾದ ದುಃಖವನ್ನು ಭರಿಸುವ ಶಕ್ತಿಯನ್ನು ಕುಟುಂಬವರ್ಗದವರಿಗೆ ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

ರಾಜ್ಯ ಕಾರ್ಯದರ್ಶಿ

## 2014-15ರ ಉತ್ತಮ ಕಾರ್ಯನಿರ್ವಹಣೆ ಹಾಗೂ ಸಂಘಟನೆಗಾಗಿ ರಾಜ್ಯ ಮಟ್ಟದ ಪರ್ಯಾಯ ಫಲಕ ಹಾಗೂ ಪ್ರಮಾಣಪತ್ರಗಳನ್ನು ಕೆಳಕಂಡ ಜಿಲ್ಲೆಗಳಿಗೆ ದಿನಾಂಕ 20.09.2015ರಂದು ಡಾ. ಅನಿಬೆಸೆಂಟ್ ತರಬೇತಿ ಹಾಗೂ ಶಿಬಿರ ಕೇಂದ್ರದಲ್ಲಿ ಜರುಗಿದ 97ನೇ ರಾಜ್ಯ ಪರಿಷತ್ ಸಭೆಯಲ್ಲಿ ವಿತರಿಸಲಾಯಿತು.




ಪ್ರಥಮ ಸ್ಥಾನ : ದಕ್ಷಿಣ ಕನ್ನಡ ಜಿಲ್ಲೆ
ಅಬ್ದುಲ್ ಗಫಾರ್ ಪರ್ಯಾಯ ಫಲಕ




ದ್ವಿತೀಯ ಸ್ಥಾನ : ದಾವಣಗೆರೆ ಜಿಲ್ಲೆ
ಜಸ್ಟೀಸ್ ಕೆ. ಶಂಕರನಾರಾಯಣರಾವ್ ಪರ್ಯಾಯ ಫಲಕ




ತೃತೀಯ ಸ್ಥಾನ : ಬೆಂಗಳೂರು ಉತ್ತರ ಜಿಲ್ಲೆ
ಮೇಜರ್. ವೈ.ವಿ.ಕೆ. ಮೂರ್ತಿ ಪರ್ಯಾಯ ಫಲಕ



97ನೇ ರಾಜ್ಯ ಪರಿಷತ್ ಸಭೆಯಲ್ಲಿ ಭಾಗವಹಿಸಿದ ಸದಸ್ಯರ ವಿಹಂಗಮ ನೋಟ.

# ವಿಭಾಗ ಮಟ್ಟದ ಪರ್ಯಾಯ ಫಲಕಗಳು

## ಬೆಂಗಳೂರು ವಿಭಾಗ




ಪ್ರಥಮ ಸ್ಥಾನ :

**ಕೋಲಾರ ಜಿಲ್ಲೆ**

**ವಿ.ಪಿ. ದೀನದಯಾಳು ನಾಯ್ಡು ಪರ್ಯಾಯ ಫಲಕ**




ದ್ವಿತೀಯ ಸ್ಥಾನ :

**ಬೆಂಗಳೂರು ದಕ್ಷಿಣ ಜಿಲ್ಲೆ**




ತೃತೀಯ ಸ್ಥಾನ :

**ತುಮಕೂರು ಜಿಲ್ಲೆ**

## ಮೈಸೂರು ವಿಭಾಗ




ಪ್ರಥಮ ಸ್ಥಾನ :

**ಉಡುಪಿ ಜಿಲ್ಲೆ**

**ಜೆ.ಬಿ. ಮಲ್ಲಾರಾಧ್ಯ ಪರ್ಯಾಯ ಫಲಕ**




ದ್ವಿತೀಯ ಸ್ಥಾನ :

**ಹಾಸನ ಜಿಲ್ಲೆ**



ತೃತೀಯ ಸ್ಥಾನ :

**ಮೈಸೂರು ಜಿಲ್ಲೆ**

# ವಿಭಾಗ ಮಟ್ಟದ ಪರ್ಯಾಯ ಫಲಕಗಳು

## ಬೆಳಗಾವಿ ವಿಭಾಗ




ಪ್ರಥಮ ಸ್ಥಾನ :
ಗದಗ ಜಿಲ್ಲೆ
ಕೊಂಡಜ್ಜಿ ಬಸಪ್ಪ ಪರ್ಯಾಯ ಫಲಕ




ದ್ವಿತೀಯ ಸ್ಥಾನ :
ಬೆಳಗಾವಿ ಜಿಲ್ಲೆ




ತೃತೀಯ ಸ್ಥಾನ :
ವಿಜಿಯಪುರ ಜಿಲ್ಲೆ

## ಕಲಬುರಗಿ ವಿಭಾಗ




ಪ್ರಥಮ ಸ್ಥಾನ :
ರಾಯಚೂರು ಜಿಲ್ಲೆ
ಪ್ರೊ. ಪಿ. ಶಿವಶಂಕರ್ ಪರ್ಯಾಯ ಫಲಕ



ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ
ರಾಜ್ಯ ಪ್ರಧಾನ ಕಾರ್ಯಾಲಯ, ಶಾಂತಿಗೃಹ, ನಂ. 39, ಅರಮನೆ ರಸ್ತೆ, ಬೆಂಗಳೂರು - 560 001

ಪ್ರಮಾಣ ಪತ್ರ

2014 - 15ನೇ ಸಾಲಿನಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್
ಚಟುವಟಿಕೆಗಳನ್ನು ಉತ್ತಮವಾಗಿ ಆಯೋಜಿಸಿದ
ಕಲಬುರಗಿ ವಿಭಾಗದಲ್ಲಿ ದ್ವಿತೀಯ ಸ್ಥಾನ ಗಳಿಸಿದ
ಬಳ್ಳಾರಿ ಜಿಲ್ಲೆಗೆ
ಪ್ರಮಾಣ ಪತ್ರ ನೀಡಲಾಗಿದೆ.

20-09-2014

ಪಿ.ಜಿ.ಆರ್. ಸಿಂಧ್ಯಾ
ರಾಜ್ಯ ಮುಖ್ಯ ಆಯುಕ್ತರು

ದ್ವಿತೀಯ ಸ್ಥಾನ :
ಬಳ್ಳಾರಿ ಜಿಲ್ಲೆ



ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ
ರಾಜ್ಯ ಪ್ರಧಾನ ಕಾರ್ಯಾಲಯ, ಶಾಂತಿಗೃಹ, ನಂ. 39, ಅರಮನೆ ರಸ್ತೆ, ಬೆಂಗಳೂರು - 560 001

ಪ್ರಮಾಣ ಪತ್ರ

2014 - 15ನೇ ಸಾಲಿನಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್
ಚಟುವಟಿಕೆಗಳನ್ನು ಉತ್ತಮವಾಗಿ ಆಯೋಜಿಸಿದ
ಕಲಬುರಗಿ ವಿಭಾಗದಲ್ಲಿ ತೃತೀಯ ಸ್ಥಾನ ಗಳಿಸಿದ
ಕಲಬುರಗಿ ಜಿಲ್ಲೆಗೆ
ಪ್ರಮಾಣ ಪತ್ರ ನೀಡಲಾಗಿದೆ.

20-09-2014

ಪಿ.ಜಿ.ಆರ್. ಸಿಂಧ್ಯಾ
ರಾಜ್ಯ ಮುಖ್ಯ ಆಯುಕ್ತರು

ತೃತೀಯ ಸ್ಥಾನ :
ಕಲಬುರಗಿ ಜಿಲ್ಲೆ

Regd. as News Paper (Magazine) RNI No : 13348/1959. Postal Regd. No. KA/BGGPO/2580/2015-17
Posted at: PSO,RMS Bhavan, Mysore Road, Bengaluru-26 on 30-10-2015 (No. of Pages : 04+04+24 = 32)



22 ಸೆಪ್ಟೆಂಬರ್ 2015ರಂದು ಹಾಸನ ಜಿಲ್ಲೆ ಅರಸೀಕೆರೆಯ ಹೊಯ್ಸಳೇಶ್ವರ ಪ್ರಥಮ ದರ್ಜೆ ಕಾಲೇಜಿನಲ್ಲಿ ಜರುಗಿದ ರಕ್ತದಾನ ಶಿಬಿರದಲ್ಲಿ ಭಾಗವಹಿಸಿರುವ ರೋವರ್‌ಸ್‌ಗಳು.



ದಿ. 15 ಆಗಸ್ಟ್ 2015ರಂದು ಹಾಸನ ಜಿಲ್ಲೆ ಹೊಳೇನರಸಿಪುರದಲ್ಲಿ ರಾಷ್ಟ್ರಪತಿ ಪ್ರಶಸ್ತಿ ಪಡೆದ ಗೈಡ್ಸ್‌ಗಳನ್ನು ಸನ್ಮಾನಿಸಲಾಯಿತು. ಸ್ಕೌಟ್ ಮಾಸ್ಟರ್ ಹಾಗೂ ಗೈಡ್ ಕ್ಯಾಪ್ಟನ್ ಚಿತ್ರದಲ್ಲಿದ್ದಾರೆ.



ದಿ. 10 ಆಗಸ್ಟ್ 2015ರಂದು ಬೆಳಗಾವಿ ಜಿಲ್ಲಾ ಸಂಸ್ಥೆ ಹಾಗೂ ಅರಣ್ಯ ಇಲಾಖೆ ಸಂಯುಕ್ತಾಶ್ರಯದಲ್ಲಿ ಜರುಗಿದ ಕಾರ್ಯಕ್ರಮದಲ್ಲಿ ಪ್ರಾಂಶುಪಾಲರು ಹಾಗೂ ಇತರರು ಸಸಿಗಳನ್ನು ನೆಟ್ಟು ನೀರೆರೆದರು.



ಇತ್ತೀಚೆಗೆ ದಾವಣಗೆರೆಯ ಶ್ರೀ ಸೋಮೇಶ್ವರ ವಿದ್ಯಾಲಯದಲ್ಲಿ ಜರುಗಿದ "ರಕ್ಷಾಬಂಧನ" ಕಾರ್ಯಕ್ರಮದಲ್ಲಿ ಭಾಗವಹಿಸಿರುವ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ವಿಹಂಗಮನೋಟ.



"ಸ್ವಚ್ಛತಾ ಕಾರ್ಯಕ್ರಮ"ದಲ್ಲಿ ತೊಡಗಿರುವ ಬೀದರ್ ಜಿಲ್ಲಾ ಸ್ಕೌಟ್ಸ್‌ಗಳು.



ದಿ. 29 ಆಗಸ್ಟ್ 2015ರಂದು ಉಡುಪಿ ಜಿಲ್ಲೆ ಕಾರ್ಕಳದ ಶ್ರೀ ಮಂಜುನಾಥ ಪೈ ಸ್ಮಾರಕ ಸ. ಪ್ರ. ದ. ಕಾಲೇಜಿನ ರೋವರ್ಸ್-ರೇಂಜರ್ಸ್‌ಗಳು ಸ್ವಚ್ಛತಾ ಕಾರ್ಯಕ್ರಮದಲ್ಲಿ ಭಾಗವಹಿಸಿರುವುದು.





SCOUTS®
Creating a Better World

**If not delivered, please return to :**
THE EDITOR, **Karnataka Scout & Guide**
State Headquarters, Shanthi Gruha
#39, Palace Road, Bengaluru - 560 001
Ph.: 080-22260017 e-mail.: shq@scout.org.in

**Published by : The Bharat Scouts & Guides, Karnataka, State Headquarters**
**Shanthi Gruha,** #39, Palace Road, Bengaluru - 560 001. **Publisher & Editor : Siddaiah,** IAS (Retd.)
**Printed by : L. Lingappa, M.D. at Sathyasri Printers Pvt. Ltd.,** 16/1, 3rd Cross, 2nd Main, Kasturiba Nagar, Mysore Road, Bengaluru-26